# ಮಲುಹಣ ದೇವ

ಡಾ. ಬಿ. ಎಸ್. ಸ್ವಾಮಿ

ಗೀತಾಂಜಲಿ ಪ್ರಕಾಶನ
ಬೆಂಗಳೂರು

"ಮಲುಹಣ ದೇವ"

ಪ್ರಕಾಶಕರು : ಗೀತಾಂಜಲಿ ಪ್ರಕಾಶನ
ಬೆಂಗಳೂರು.

ಕಾದಂಬರಿಕಾರರು - ಡಾ. ಬಿ.ಎಸ್. ಸ್ವಾಮಿ

ಕಲೆ - ಮಾಯಾ



ಪ್ರಕಟಣೆ : 1995



ಬೆಲೆ ರೂ. ೫೦.೦೦

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್
ನಂ. 5, ಎಂ.ಎಸ್. ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್,
ಗೋಕುಲ,
ಬೆಂಗಳೂರು - 54.

ಈ ಕಾದಂಬರಿಯಲ್ಲಿ ಅಷ್ಟೇನೂ ಮಾರ್ಪಾಟುಗಳನ್ನು ಮಾಡಿಲ್ಲ. ಮಲುಹಣನ ಮಿತ್ರರಾದ ಜಯದೇವ್, ವಿಜಯ್, ಮಲುಹಣೆಯ ಸ್ನೇಹಿತೆಯರಾದ ಸರೋಜ್, ಸ್ವರೂಪ್, ಅಡಿಗೆಯ ಕೇಶವಭಟ್ಟ, ಕಾವಲಿನ ಕಾವಲ್ ಈ ಪಾತ್ರಗಳ ಕಾಲ್ಪನಿಕವಾಗಿ ಉಪಯೋಗಿಸಿಕೊಂಡಿದ್ದೇನೆ.

ಕಾದಂಬರಿಯಲ್ಲಿ ಕಾಶ್ಮೀರದ ವರ್ಣನೆ, ಜನಜೀವನ, ಮಲುಹಣೆ, ಮಲುಹಣ, ಸುವರ್ಣಭಟ್ಟ, ಪದ್ಮಾವತಿಯರ ವ್ಯಕ್ತಿತ್ವಗಳನ್ನು ಸವಿಸ್ತಾರವಾಗಿ ತಂದಿದೆ.

ಆಕಾಶವಾಣಿ, ಬೆಂಗಳೂರು. ಬಿ. ಎಸ್. ಸ್ವಾಮಿ

# ನನ್ನ ಮಾತು

ನಾನು "ಮಹಾಕವಿ ಹರಿಹರ" ಎಂಬ ಕಾದಂಬರಿಯನ್ನು ಬರೆಯುವ ಸಂಧರ್ಬದಲ್ಲಿ ಆತನ ಸಂಪೂರ್ಣ ಸಾಹಿತ್ಯವನ್ನು ಅವಲೋಕಿಸಿದ್ದೆ. ಆಗ "ಮಲುಹಣ ದೇವ ಚರಿತೆ"ಯು ನನಗೆ ತುಂಬಾ ಹಿಡಿಸಿತು. ಆಮೇಲೆ "ರಸಿಕ ಚಕ್ರಿ" ಎಂಬ ಹೆಸರಿನಲ್ಲಿ ಒಂದು ಚಿಕ್ಕ ರಂಗ ನಾಟಕ ಬರೆದು ಹೈಸ್ಕೂಲ್ ವಾರ್ಷಿಕ ಪತ್ರಿಕೆಯಲ್ಲಿ ಪ್ರಕಟಿಸಿದೆ. ಆನಂತರ ಇದರ ಕುರಿತು ಒಂದು ಸಣ್ಣ ಕತೆಯನ್ನು ಬರೆದೆ. ಅದು "ರಸಿಕ ಚಕ್ರೇಶ್ವರ" ಎಂಬ ಹೆಸರಿನಲ್ಲಿ ಸಂಯುಕ್ತ ಕರ್ನಾಟಕದಲ್ಲಿ ಪ್ರಕಟಿಸಲ್ಪಟ್ಟಿತು. ಆದರೆ ಅದೂ ನನಗೆ ತೃಪ್ತಿ ಕೊಡಲಿಲ್ಲ. ಇದರ ಬಗ್ಗೆ ಕಾದಂಬರಿಯನ್ನೇ ಏಕೆ ಬರೆಯಬಾರದು? ಎಂದು ಮನಸ್ಸು ಮಾಡಿ ಬರೆದು ಮುಗಿಸಿದೆ. ಅದೇ ಈಗ "ಮಲುಹಣ ದೇವ" ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿರುವ ಕಾದಂಬರಿ.

ಮೂಲಕೃತಿಗೆ ಯಾವ ಚ್ಯುತಿಯೂ ಬರದ ರೀತಿಯಲ್ಲಿ ಕೆಲವು ಮಾರ್ಪಾಟುಗಳನ್ನು ಇಲ್ಲಿ ಮಾಡಿಕೊಂಡಿರುವೆ, ಕಾರಣ ಕಾದಂಬರಿ ಕಲಾತ್ಮಕವಾಗಲೆಂದು. "ವಾತ್ಸ್ಯಾಯನ ಕಾಮ ಸೂತ್ರ"ವನ್ನು ಸೂಚ್ಯವಾಗಿ ತಂದು ಅತಿ ಕಾಮಕ್ಕೆ ಎಡೆಗೊಟ್ಟಿಲ್ಲ. ಕಾಶ್ಮೀರದ ಶೈವ ಕವಿ ಮಲುಹಣನ ಜೀವನವನ್ನು ಚಿತ್ರಿಸುವ ಒಂದು ಶೃಂಗಾರ ಕಾದಂಬರಿ ಇದು. ಮಲುಹಣನ ಕಾಲವನ್ನು ಖಚಿತವಾಗಿ ಹೇಳುವಂತಿಲ್ಲ. ಕಾರಣ ಹದಿಮೂರನೆಯ ಶತಮಾನದಲ್ಲಿ ಹರಿಹರ ಕವಿಯು ಕಾಶ್ಮೀರದತ್ತ ಹೋಗಿದ್ದಾಗ ಅಲ್ಲಿನ ಜನಪದ ಕಥೆಯನ್ನು ಕೇಳಿ ಇದನ್ನು ರಚಿಸಿದಂತೆ ಕಾಣುತ್ತದೆ, ಈ ವಿಷಯಗಳ ಸಂಗ್ರಹಣೆಯ ಬಗ್ಗೆ ಹಲವಾರು ಪುಸ್ತಕಗಳನ್ನು ಓದಿದೆ, ಅದಷ್ಟು ಐತಿಹಾಸಿಕವಾಗಿ ರಚಿಸಬೇಕೆಂಬುದು ನನ್ನ ಹೃಗ್ಗತವಾಗಿತ್ತು. ಆದರೆ ದೊರಕಲಿಲ್ಲ. ಶಿವಶರಣರ ಸಾಲಿಗೆ ಸೇರಿರುವ ಈತನ ಜೀವನವನ್ನು ಹರಿಹರ ಅಂದಿನ ಜನರ ಬಾಯಿಂದ ಕೇಳಿ"ಮಲುಹಣದೇವ ಚರಿತೆ" ಎಂಬ ಪುಟ್ಟ ರಗಳೆ ಕಾವ್ಯವನ್ನು ರಚಿಸಿದನೆಂದು ತಿಳಿಯಬಹುದು.

# ಮಲುಹಣ ದೇವ

*

"ಮಲುಹಣಾ... ಮಲುಹಣಾ"

ಸುವರ್ಣಭಟ್ಟರ ಧ್ವನಿಯಲ್ಲಿ ಅಚ್ಚರಿಯ ಜತೆಗೆ ಅಳುಕು ತುಂಬಿತ್ತು. ಧ್ವನಿಯನ್ನು ಕೇಳಿದ ಮಲುಹಣನು ತನ್ನ ಮೈಮೇಲಿದ್ದ ಶಾಲನ್ನು ತೆಗೆದು ಮೇಲೇಳುವ ಪ್ರಯತ್ನದಲ್ಲಿದ್ದನು. ಅದನ್ನು ಗಮನಿಸಿದ ತಂದೆ-

"ಮಗೂ... ಏಕೆ ಶಾಲನ್ನು ಹೊರಗೆ ಹಾಕಿದೆ, ಚೆನ್ನಾಗಿ ಹೊದ್ದುಕೋ. ಹೊರಗಡೆ ಇನ್ನೂ ಹಿಮ ಬೀಳುತ್ತಲಿದೆ, ಮಲಗಿಕೋ, ಈಗ ಎದ್ದು ಮಾಡುವುದಾದರೂ ಏನು?"

ಎಂದು ಹೊದಿಕೆಯನ್ನು ಹೊದಿಸಿದರು.

"ಏನೂ ಬೇಡಿ ಬಿಡಿ ಅಪ್ಪಾಜಿ..." ಎಂದು ತಾನೇ ಸರಿಯಾಗಿ ಹೊದ್ದುಕೊಂಡ.

"ನೀನು ಹಾಗೆಂದರೆ ನಾನು ಒಪ್ಪುವುದಿಲ್ಲ. ನಿನ್ನ ಆರೋಗ್ಯ ಸರಿಯಿದ್ದಿದ್ದರೆ ಹೀಗೆ ಬೆಳಗಿನ ಹೊತ್ತು ಮಲಗುತ್ತಿರಲಿಲ್ಲ, ಏಕೆ ಏನಾಗಿದೆ?"

ಎಂದು ಮತ್ತೆ ಹತ್ತಿರ ಸರಿದು ಕುಳಿತು ಹಣೆಯನ್ನು ಮುಟ್ಟಿದರು. ಅದಕ್ಕೂ ಸಮಾಧಾನ ಬರದೆ ಎದೆಯಲ್ಲಿ ಉಷ್ಣವನ್ನು ಪರೀಕ್ಷಿಸಿದರು. ಅದಕ್ಕೂ ತೃಪ್ತಿಯಾಗದೆ ನಾಡಿಯನ್ನು ಹಿಡಿದು ನೋಡುತ್ತಿರಲು ತಂದೆಯ ಅಳುಕನ್ನು ಕಂಡು ಮನದಲ್ಲೇ ನಕ್ಕು ಉಲಿದ...

"ಅಪ್ಪಾಜಿ ಏಕೆ ಇಷ್ಟೊಂದು ಅನುಮಾನ ನನ್ನ ಆರೋಗ್ಯದ ವಿಚಾರದಲ್ಲಿ?"

"ಹೌದು ಮಗೂ, ನಾನು ನಿನ್ನೆ ಬೆಳಿಗ್ಗೇನೆ ಹೇಳಿದ್ದೆ. ಮಂಜು ಬೀಳುತ್ತದೆ, ಬೆಚ್ಚನೆಯ ಉಡುಪನ್ನು ಹಾಕಿಕೊಂಡು, ಒಳಗಡೆ ಅಗ್ಗಿಷ್ಟಿಕೆ

ಯಲ್ಲಿ ಮೈ ಕೈ ಕಾಯಿಸಿಕೊಳ್ಳಲು ಹೇಳಿದರೂ ನನ್ನ ಮಾತನ್ನು ಗಮನಕ್ಕೆ ತೆಗೆದುಕೊಳ್ಳದೆ ಏನಾಗುತ್ತದೆ ಬಿಡಿ ಅಪ್ಪಾಜಿ? ಎಂದು ಅಲಕ್ಷ್ಯ ಮಾಡಿಬಿಟ್ಟೆ.

"ಅಪ್ಪಾಜಿ ನೀವು ನನ್ನ ಆರೋಗ್ಯದ ವಿಚಾರದಲ್ಲಿ ಇಷ್ಟೊಂದು ಆಸಕ್ತಿ ವಹಿಸುತ್ತಿರುವುದು ನನಗೇನು ನೋಡುವವರಿಗೂ ನಗು ಬರಿಸುತ್ತದೆ ಅಲ್ಲವೇ ಸ್ವಲ್ಪ ಯೋಚಿಸಿ ನೋಡಿ"

"ಆದರೆ ನನಗೆ ದುಃಖವಾಗುತ್ತದೆ ಮಗೂ..."

ಎಂಬ ಮಾತನ್ನು ಮುಂದುವರಿಸುವಲ್ಲೇ ಕಂಗಳಲ್ಲಿ ನೀರು ಬಳ್ಳ ಲಾಡತೊಡಗಿತು. ದುಗುಡದ ದನಿಯಲ್ಲೇ ಮಾತನ್ನು ಮುಂದುವರಿಸಿದರು ಸುವರ್ಣಭಟ್ಟರು-

"ಮಲುಹಣಾ ನಮ್ಮ ಹಲವು ದಿನದ ತಪಸ್ಸಿನ ಫಲವಾಗಿ ವಿಜ ಯೇಶ್ವರನು ನಿನ್ನನ್ನು ಮಗನಾಗಿ ಕರುಣಿಸಿದ. ನಿನ್ನ ತಾಯಿ ನಿನಗೆ ಜನ್ಮವಿತ್ತು ನಿನ್ನ ಬಾಲಲೀಲೆಗಳನ್ನೆಲ್ಲಾ ಕಣ್ದಣಿಯೆ ನೋಡಿ ಆನಂದಿಸಿದಳು. ಆದರೆ ವಿಧಿಯು ನಿನ್ನನ್ನು ಇನ್ನೂ ನೋಡಿ ಸಂತೋಷಪಡಲು ಆಕೆಯನ್ನು ಉಳಿಸ ಲಿಲ್ಲ. ಅಂದಿನಿಂದ ನಾನೇ ನಿನಗೆ ತಂದೆಯಾಗಿ, ತಾಯಿಯಾಗಿ ಕಾಪಾಡುತ್ತಾ ಬಂದೆ. ನನ್ನ ಕಣ್ಣಿಗೆ ಕಾಣದೆ ನೀನು ಸ್ವಲ್ಪ ನೊಂದರೂ ನನಗೆ ವೇದನೆ ಯಾಗುತ್ತದೆ. ಈ ಪ್ರಪಂಚದಲ್ಲಿ ನಿನ್ನೊಬ್ಬನನ್ನು ಬಿಟ್ಟರೆ ನನಗೆ ಬೇರೆ ಯಾರೂ ಇಲ್ಲ. ನೀನೇ ನನಗೆ ಸರ್ವಸ್ವ. ನನ್ನ ರಕ್ತದ ಕಣಕಣದ ಶ್ರಮವೂ ನಿನ್ನ ಶ್ರೇಯಸ್ಸಿಗೆ ನಿನ್ನ ಸುಖ ಸಂಪತ್ತಿಗೆ, ಪುತ್ರ ವಾತ್ಸಲ್ಯ ನನ್ನನ್ನು ಸದಾ ಕಾಡಿಸುತ್ತಿದೆ. ಮಗು ನೀನು ಸಂತೋಷವಾಗಿದ್ದರೆ ನನಗೆ ಅದಕ್ಕಿಂತ ಬೇರೊಂ ದಿಲ್ಲ ಮಲುಹಣಾ... ನಿನ್ನ ಮೇಲಿಟ್ಟಿರುವ ವ್ಯಾಮೋಹವನ್ನು ಇದಕ್ಕಿಂತ ಹೆಚ್ಚಾಗಿ ಹೇಳಲು ನನ್ನಿಂದ ಆಗುತ್ತಿಲ್ಲ."

ಮಾತನಾಡುತ್ತಿರುವಲ್ಲಿ ತಂದೆ ಕಂಗಳಿಂದ ದುಃಖ-ಆನಂದ ಬಾಷ್ಪಗಳು ಒಂದೊಂದಾಗಿ ಉದುರಿದವು. ತಂದೆಯ ವಾತ್ಸಲ್ಯವನ್ನು ನೋಡಿದ ಮಗನ ಕಂಗಳೂ ಒದ್ದೆಯಾಗದೆ ಇಲ್ಲ. ಕೂಡಲೆ ದೃಢ ದನಿಯಲ್ಲಿ ಸುವರ್ಣಭಟ್ಟರು-

"ಮಲಗು.... ಮಲುಹಣಾ"

ಎಂದು ಹೇಳಿ ಆತನ ಕೋಣೆಯಿಂದ ಹೆಜ್ಜೆ ಇಡುವುದರಲ್ಲಿದರು. ಅವರನ್ನೆ ದಿಟ್ಟಿಸಿದ ಮಲುಹಣ ತಂದೆಯ ಆಶಾಪಾಶದ ಮಗುವಾಗಿ ನಾನು ಬಿದ್ದಿರುವೆ. ನನ್ನನ್ನು ಕಂಡರೆ ಏಕೆ ಇಷ್ಟೊಂದು ಮಮತೆ? ಎಂಬ ಯೋಚನೆ ಯಲ್ಲಿ ನಿರತನಾದ. ಕಿಟಕಿ ಬಾಗಿಲಿನಲ್ಲಿನ ತೆರೆಗಳು ಗಾಳಿಗೆ ಹಾರುತ್ತಾ, ಹೊರಗಿನಿಂದ ಒಳಗಡೆಗೆ ಹಿಮ ಬೀಳಲಾರಂಭಿಸಿತು. ಕೂಡಲೇ ಮಲುಹ ಣನು ಕಿಟಕಿಯನ್ನು ಮುಚ್ಚುವುದರಲ್ಲಿದ್ದ. ಸುವರ್ಣಭಟ್ಟರು ಮುಂದಿಟ್ಟ ಹೆಜ್ಜೆಯನ್ನು ಹಿಂದಿಟ್ಟು--

"ಮಲುಹಣಾ... ಹಿಮ ಬೀಳುತ್ತಲಿದೆ. ಗಾಳಿಗೆ ಮೇಲಿರುವ ಗವಾಕ್ಷಿ ಗಳೇ ಸಾಕು. ಕೆಳಗಿನ ಕಿಟಕಿಗಳನ್ನು ಮುಚ್ಚಿಬಿಡಲೇ?"

"ಅಪ್ಪಾಜಿ, ನಾನು ಹಾಕಿಕೊಳ್ಳುತ್ತೇನೆ. ನೀವೇಕೆ ಕಷ್ಟಪಡಬೇಕು? ನೀವು ಮಲಗಿ ಹೋಗಿ"

"ನನ್ನ ಕಷ್ಟ, ಶ್ರಮ, ಎಲ್ಲಾ ನಿನಗೆ... ಅದರ ಮುಂದೆ ಈ ಕೆಲಸಗಳು ನನಗೆ ತೃಣಮಾತ್ರ"

ಎದು ಹೋಗಿ ಮುಚ್ಚುತ್ತಿರಲು ಮಲುಹಣನು ಎದ್ದು ಮತ್ತೊಂದನ್ನು ಹಾಕಲಾರಂಭಿಸಿದ. ಅಷ್ಟು ಹೊತ್ತಿಗೆ ಕೇಶವ ಭಟ್ಟರು ಕಷಾಯವನ್ನು ಮಾಡಿ ತಂದು-

"ಸುವರ್ಣಭಟ್ಟರೇ, ಕಷಾಯ ತಂದಿದ್ದೇನೆ...."

"ಕೊಡಿ ಕೇಶವ ಭಟ್ಟರೇ...."

"ಇದೆಲ್ಲಾ ಏನು ಅಪ್ಪಾಜಿ...?"

"ಏಕೆ ಮಗು ಚಳಿ ಹೆಚ್ಚು, ದುಮು ದುಮು ಎನ್ನುತ್ತಿದ್ದೀಯೆ ನೆಗಡಿ ಬೇರೆ ಬಂದಂತಿದೆ, ಅದಕ್ಕೆ... ತಗೋ...."

"ಆಗಲೀ... ಅಪ್ಪಾಜಿ... "

ಎಂದು ಕುಡಿಯಲನುವಾದ. ಸುವರ್ಣ ಭಟ್ಟರು ಕೇಶವ ಭಟ್ಟರತ್ತ ಮುಖ ಮಾಡಿ-

"ಭಟ್ಟರೇ.... ಏನು ಕುಡಿಯುವುದನ್ನು ನೋಡ್ತಾ ನಿಂತು ಬಿಟ್ರಾ?" ಎನ್ನಲು ಚಂಚಲ ನಯನರಾಗಿ

"ಏನು ಮಾಡಬೇಕು?" ಎಂದು ತೊದಲಿದರು ಭಟ್ಟರು.

ಸ್ವಲ್ಪ ಅಗ್ಗಿಷ್ಟಿಕೆಯನ್ನು ಹಚ್ಚಿಬಿಡಿ. ಇನ್ನೂ ಚಳಿ, ಸ್ವಲ್ಪ ಮೈ ಕೈ ಶಾಖವಾಗಿರ್ಲಿ ಮಲುಹಣನಿಗೆ"

"ಆಗಲಿ" - ಎಂದು ಭಟ್ಟರು ಉರಿ ಹಾಕಲು ಅಣಿ ಮಾಡಿಸಿದರು.

ಕಷಾಯ ಕುಡಿದು ಲೋಟವನ್ನು ದುಂಡು ಮೇಜಿನ ಮೇಲಿಟ್ಟು-

"ಅಪ್ಪಾಜಿ ಎಷ್ಟು ಹೊತ್ತಿನಲ್ಲೂ ನನ್ನ ಹಿತಚಿಂತನೆ, ಮಾಡುವುದರಲ್ಲೇ ನೀವು ಕೃಶರಾದರೆ ಸರಿಯಲ್ಲ. ನಾನು ಚೆನ್ನಾಗಿರಬೇಕಾದರೆ ನೀವೂ ಅಷ್ಟೇ ಚೆನ್ನಾಗಿರಬೇಕು ಅಲ್ಲವೇ?" ಎಂದ ಮಲುಹಣ ನುಣ್ಣನಿಯಲ್ಲಿ.

"ನಮ್ಮದೇನು ಮಗು? ವಯಸ್ಸು ಮೀರಿತು. ಇನ್ನೆಷ್ಟು ತಿನ್ನಲಾದೀತು. ಅರಗೀತು? ಇನ್ನೂ ನೀನು ಹರೆಯದವ "ಕರು ಹೊರೆ ಮೇಯಿತು" ಅಂದಹಾಗೆ ಚೆನ್ನಾಗಿ ತಿನ್ನಬೇಕು. ವ್ಯಾಯಾಮ ಮಾಡಬೆಕು. ನಗು ನಗುತ್ತಾ ಗೆಲುವಾಗಿರಬೇಕು" ಎಂದು ಕಿಟಕಿಯತ್ತ ಗಾಳಿಗೆ ನರ್ತಿಸುತ್ತಿದ್ದು ಹೂಗಳನ್ನು ನೋಡಿದರು. ಅವರ ಮಾತು ಮಾತಿನಲ್ಲೂ ಪುತ್ರವಾತ್ಸಲ್ಯ ತುಂಬಿ ತುಳುಕುತ್ತಿತ್ತು.

"ಇನ್ನೂ ನೀವು ಹೋಗಿ ವಿಶ್ರಮಿಸಿಕೊಳ್ಳಿ, ನಾನು ಮಲಗುತ್ತೇನೆ?

"ಇದೇನು ಊಟ ಬೇಡವೇ?"

"ಆಗಲೇ ಪೀಡಿಸಿ ತಿನ್ನಿಸಿದ ತಿಂಡಿ ಇನ್ನೂ ನನಗೆ ಜೀರ್ಣವಾಗಿಲ್ಲ ಅಪ್ಪಾಜಿ"

"ಸ್ವಲ್ಪ ತೆಗೆದುಕೋ ಮಗು. ಬೇಳೆ ಸೊಪ್ಪಿನ ಪಲ್ಯ, ಸಾರು, ಬಿಸಿ ಅನ್ನ ಮಾಡಿದ್ದಾರೆ ಭಟ್ಟರು, ಚೆಂದಾಗಿದೆ. ಅದನ್ನು ಬಿಟ್ಟು, ಅಲಗುವುದು ಎಂದರೇನು? ಎಲ್ಲಾದರೂ ಉಂಟೇ?"

"ಇಲ್ಲಾ..... ಬೇಡಿ ಅಪ್ಪಾಜಿ... ಇಲ್ಲದಿದ್ದರೆ ಅಜೀರ್ಣವಾಗುತ್ತದೆ" ಕೂಡಲೇ ಯೋಚಿಸಿ ತಂದೆ,

"ಸರಿ ಹಾಗಿದ್ದರೇ ಬೇಡ... ಸ್ವಲ್ಪ ಹಾಲನ್ನಾದರೂ ತಂದು ಕೊಡಿ ಭಟ್ಟರೇ"

"ಆಗಲಿ" ಎಂದು ಭಟ್ಟರು ಅಡಿಗೆ ಕೋಣೆಯತ್ತ ನಡೆದರು. ಸುವರ್ಣಭಟ್ಟರು ಮಗನನ್ನೇ ದಿಟ್ಟಿಸಿ ನೋಡುತ್ತಾ ನಿಂತಿರಲು-

ನಾನು ಕುಡಿಯುತ್ತೇನೆ ನೀವು ಮಲಗಿ ಹೋಗಿ ಅಪ್ಪಾಜಿ ಏಕೆ ನಾನು ತಿನ್ನುವವರೆವಿಗೂ, ಕುಡಿಯುವವರೆಗೂ ನಿಮಗೆ ಸಮಾಧಾನವಿಲ್ಲ ಅಂತ ಕಾಣುತ್ತೆ" ಎಂದು ಮುಗುಳ್ನಕ್ಕ.

"ಹೌದು ಮಗು..."

ಎನ್ನುತ್ತಿದ್ದಂತೆಯೇ ಹಾಲು, ಹಣ್ಣು ಬಂತು. ಮಲುಹಣನು-

"ಅಪ್ಪಾಜಿ... ನೀವು ಬನ್ನಿ. ನೀವೂ ತಿನ್ನುತ್ತಿದ್ದರೆ ನನಗೂ ಸಮಾಧಾನ"

ತಂದೆಯು ಮುಗುಳ್ನಗುತ್ತಾ ಒಂದು ಸೇಬನ್ನು ಕತ್ತರಿಸಿ ಮಗನ ಬಾಯಿಗಿಡುತ್ತಿರಲು, ಭಟ್ಟರು ನಗುತ್ತಾ, ಅಲ್ಲಿಂದ ಕಾಲಿಗೆ ಬುದ್ಧಿ ಹೇಳಿದರು. ಅದನ್ನು ನೋಡಿದ ಮಲುಹಣ ತಂದೆಯನ್ನು ಕುರಿತು-

"ನೋಡಿದಿರಾ ಅಪ್ಪಾಜಿ, ಅಡಿಗೆ ಭಟ್ಟರೂ, ನಿಮ್ಮ ಪ್ರೀತಿಯನ್ನು ನೋಡಿ ನಗುತ್ತಾರೆ"

"ಏಕೆ...?"

"ಮಗುವಿನಂತೆ ಉಪಚಾರ ಮಾಡುತ್ತೀರಲ್ಲಾ ಅಂತ"

"ಹೌದು ಅದರಲ್ಲೇನು ತಪ್ಪು ಮಗೂ? ಎಷ್ಟು ದೊಡ್ಡವನಾದರೂ ತಂದೆಗೆ ಆತ ಮಗೂನೇ.... ಎಲಾ ಭಟ್ಟ...." ಎಂದು ಮಾತನ್ನು ಮೊಟಕು ಮಾಡಿದರು.

"ಪಾಪ, ಅವರನ್ನೇಕೆ ಹಾಗನ್ನುತ್ತೀರಿ?" ಎಂದು ದೈನ್ಯದ ದನಿಯಲ್ಲಿ ಮಲುಹಣ

"ನೀನು ತಿನ್ನು.... ತಿನ್ನು..... ಮಗು.... ...." ಎಂದು ಬಾಯಿನತ್ತ ಸೇಬಿನ ಚೂರನ್ನಿತ್ತರು. ಮಲುಹಣ ತಂದೆಯ ಬಾಯಿಗೂ ನೀಡಿ ಅವರಿಗೂ ತಿನ್ನಿಸಿದ. ಇಬ್ಬರೂ ತಿಂದು ಹಾಲು ಕುಡಿದರು.

ಮಲುಹಣನು ತಂದೆಯ ಆಳವಾದ ಹೃದಯಕ್ಕೆ ನಮಿಸಿ ಹಾಗೆಯೇ ಮೇಲೊರಗಿ ನಿದ್ದೆ ಮಾಡಲಾರಂಭಿಸಿದ. ಅಗ್ಗಿಷ್ಟಿಕೆಯ ಕಾವು ಆತನ ಕೋಣೆಯ ಹವೆಯನ್ನು ಹಿತವಾಗಿ ಮಾಡಿ ಚಳಿಯನ್ನೋಡಿಸಿತ್ತು. ಹೊರಗಿನ ಪ್ರಕೃತಿ ಸೌಂದರ್ಯವನ್ನು ಹಿಮ ಮುಚ್ಚಿ ಕತ್ತಲು ಮಾಡಿತ್ತು. ವಾತಾವರಣವು ನಿಶ್ಶಬ್ದವನ್ನಪಪಿ ಮಲುಹಣನನ್ನೂ ನಿದ್ರಾಲೋಕಕ್ಕೆ ಕರೆದೊಯ್ಯಿತು!.

ಸೂರ್ಯನು ಉದಯಿಸುತ್ತಿದ್ದಂತೆಯೇ ಹೊಗೆ ಹೊಗೆಯ ರೂಪಿನಲ್ಲಿ ಹರಡಿಕೊಂಡಿದ್ದ ಪ್ರಕೃತಿಯ ಮಂಜು ಮಾಯವಾಗುತ್ತಾ ಸೂರ್ಯನ ಕೆಂಗಿರಣ ಹೊಂಗಿರಣ ವಾಗುತ್ತಿತ್ತು. ಚೈತ್ರ ಮಾಸದ ಬನವೆಲ್ಲಾ ಹೊಸ ಚೇತನ ತುಂಬಿ, ಹೊಸ ಜೀವ ತಾಳಿ ಕಂಗೊಳಿಸಲಾರಂಭಿಸಿತು. ಕಾಶ್ಮೀರದ ಭಾರತೀ ಪೀಠ ಪಟ್ಟಣ ಎಂದ ಮೇಲೆ ಕೇಳಬೇಕೆ? ಹಸಿರು ಪ್ರಕೃತಿ ಮಧ್ಯೆ ಸ್ವಚ್ಛ ಮಂಜಿನ ಮಲೆಗಳು ಮಾಟಕೂಟವಾಗಿ ಕಣ್ಣಿಗೆ ಹಬ್ಬವನ್ನೀಯುವಂತಿತ್ತು. ಕಸ್ತೂರಿಯ ಮೃಗಗಳು, ಚಮರೀ ಮೃಗಗಳು ಪ್ರಕೃತಿಯ ಮಧ್ಯೆ ಸುಳಿದಾಡಲಾರಂಭಿಸಿದವು. ಹತ್ತಿರದಲ್ಲಿನ ನದಿಯ ಓಟದಿಂದ ಕಂಗೊಳಿಸುತ್ತಿತ್ತು. ಮನೆಯ ಮುಂದಿದ್ದ ಕಲಾ ಮಂಟಪಗಳು, ದ್ರಾಕ್ಷಿಯ ಬಳ್ಳಿಗಳು, ನಾನಾವಿಧ ಹೂಗಳು ನೋಟಕ್ಕೆ ಅಂದವಾಗಿ, ನಾಸಿಕಕ್ಕೆ ಹಿತವಾಗಿ, ಪ್ರಕೃತಿ ದೇವಿಯ ನರ್ತನ ರಂಗದಲ್ಲಿ ನರ್ತಿಸಲಾರಂಭಿಸಿದವು. ಬಾಳೆ, ಕಿತ್ತಳೆ, ನೇರಳೆ, ದಾಳಿಂಬೆಯ ಹಣ್ಣುಗಳ ರಸ ತುಂಬಿ ನಿಂತಿದ್ದವು. ಅಲ್ಲಲ್ಲಿ ಕೊಳಗಳು, ಬಳಸಿದ್ದು, ನೀರ್ವಕ್ಕಿಗಳು ಆನಂದದಲ್ಲಿ ಮಿಲನ ಹೊಂದಿದ್ದವು. ಹಂಸಗಳು ಸಂತಸದಲ್ಲಿ ತೇಲುತ್ತಿದ್ದವು. ಚೇತನ ತುಂಬಿದ ಪ್ರಕೃತಿಯಲ್ಲಿ ಗಿಡ-ಮರ ಬಳ್ಳಿಗಳು, ಪ್ರಾಣಿ ಪಕ್ಷಿಗಳು ವಸಂತ ಮಾಸದ ಸುಸ್ವಾಗತದ ಶುಭ ಸಂಗೀತ ಹಾಡುತ್ತಿರಲು ಮಲುಹಣನು ಕಂಗಳನನ್ನು ಹೊರಳಿಸಿ ಸುತ್ತಲೂ ನೋಡಿದ. ಅದರ ಅಂದವನ್ನು ಮೇಲೆದ್ದು ನೋಡಬೇಕೆನಿಸಿತು ಕಿಟಕಿಯ ಬಾಗಿಲನ್ನೂ ತೆಗೆದು ನೋಡಿದ ಕಂಗಳಿಗೆ ಹಬ್ಬವಾಯಿತು. ವಸಂತದೋಕುಳಿಯಲ್ಲಿ ಮಿಂದ ಗಿಡಮರ ಪ್ರಾಣಿಪಕ್ಷಿಗಳನ್ನೆಲ್ಲಾ ಮನೆಯ ಹೊರಗಡೆ ಬಂದು

ಸೋಪಾನದಲ್ಲಿ ಕುಳಿತು ನೋಡಲಾರಂಭಿಸಿದ ದೈವ ಸೃಷ್ಟಿಯನ್ನು ಹೊಗಳುತ್ತಾ ನಿಂತರಿರಲು ತಂದೆ ಸುವರ್ಣಭಟ್ಟರು ವಿಜಯೇಶ್ವರನ ಪೂಜೆ ಮಾಡಿ ಫಲ-ಪುಷ್ಪ-ಪ್ರಸಾದಗಳೊಡನೆ ಬಂದರೂ ಅದನ್ನು ನೋಡಿದ ಮಲಹಣನು ತನ್ನಲ್ಲೇ-

"ನಾನೆಷ್ಟು ಸೋಂಬೇರಿಯಾದೆ. ತಂದೆಯವರು ದೇವರ ಪೂಜೆ ಮಾಡಿ ಬರುತ್ತಿದ್ದಾರೆ. ನಾನಿನ್ನೂ ಅನಿಷ್ಟದ ಮುಖದಿಂದಲೇ ಇದ್ದೀನಲ್ಲಾ"

ಎನ್ನುತ್ತಾ ಒಳಗೆ ಹೋಗುವ ಮನ ಮಾಡಿದನು. ಅಷ್ಟರಲ್ಲೇ ತಂದೆ "ಮಲುಹಣಾ.... ಏಕೆ ಇಷ್ಟು ಬೇಗನೆ ಎದ್ದು ಬಿಟ್ಟೆ? ಇನ್ನೊಂದು ತಾಸು ಮಲಗಿದ್ದರೆ ಆಗುತ್ತಿರಲಿಲ್ಲವೇ?"

"ನಾನು ಎದ್ದುದೇ ಹೊತ್ತಾಯಿತಲ್ಲಾ ಎಂದು ಯೋಚಿಸುತ್ತಿರುವೆ"

"ಈಗ ಎದ್ದು ಏನು ಮಾಡಬೇಕು? ಕಾರ್ಯವನ್ನು ಮಾಡದೆ ಹೋದರೆ ತಾನೇ ಏನು ಸೂರೆ ಹೋಗುವುದು? ವಿಶ್ರಮಿಸಿಕೋ"

"ಸೋಂಬೇರಿತನ ಬೆಳಿಸಿದಂತಾಗುವುದಿಲ್ಲವೇ ಅಪ್ಪಾಜಿ?"

ತಂದೆಗೆ ನಿಜವೆನಿಸಿತು. ಮಗನನ್ನು ನಿಂತ ಭಂಗಿಯಲ್ಲೇ ನೋಡಿದರು ತಂದೆಯನ್ನುದ್ದೇಶಿಸಿ ಮಲುಹಣನುಲಿದ-

"ಒಳಗೆ ನಡೆಯಿರಿ ಅಪ್ಪಾ"

ಆತನ ಅಜಾನುಬಾಹುಗಳು, ದೇಹದತ್ತ ಮತ್ತೆ ದೃಷ್ಟಿ ಬೀರಿ,

"ಮಲುಹಣಾ ಏಕೆ ಹಾಗೇ ನಿಂತೆ? ಸ್ನಾನ ಪೂಜೆಗಳನ್ನು ಮಾಡಿ ಬಂದುಬಿಡು. ವಿಜಯೇಶ್ವರನ ಪ್ರಸಾದವನ್ನು ಸ್ವೀಕರಿಸುವೆಯಂತೆ"

"ಆಗಲಿ ... ಅಪ್ಪಾಜಿ...."

ಎಂದು ಮಗನು ಪ್ರಕೃತಿಯತ್ತ ನೋಡುತ್ತಾ ನಿಂತ. ತಂದೆ ಮಗನ ತಾರುಣ್ಯದ ಲಾವಣ್ಯ ನೋಡುತ್ತಾ ನಿಂತರು.

ಮಲುಹಣನ ಬೆಳ್ಳಿಯಂತ ದೇಹಕ್ಕೆ ಚಿನ್ನದೋಕುಳಿಯನ್ನು ಎರಚಿತ್ತು. ಕಪ್ಪನೆ ಕೂದಲೂ ಮಿಂಚುತ್ತಿತ್ತು. ಮುಂಗುರುಳುಗಳು

ಹಣೆಯನ್ನು ಮುದ್ದಿಡುತ್ತಿದ್ದವು. ಚಿಗುರು ಮಿಸೆ ಕೆಂದುಟಿ ಚೆಲುವನ್ನು ನೋಡುತ್ತಾ ಚುಂಬಿಸುತ್ತಿತ್ತು. ಶತ ಕೋಟಿ ಸೂರ್ಯ ಪ್ರ ಯಿಂದ ತುಂಬಿ ಆಕರ್ಷಿತನಾಗಿ ಕಾಣುತ್ತಿದ್ದನು. ರಸ ತುಂಬಿದ ಕೆನ್ನೆಗ ರಂಜಿಸುತ್ತಾ ರೂಪರೇಖೆ ಮನ್ಮಥನನ್ನು ಒಂದು ಕೈ ಮೀರಿಸುವಂತಿತ್ತು ಹೆಚ್ಚಿಗೆ ನೋಡಿದರೆ ಇನ್ನೆಲ್ಲಿ ಕಣ್ಣೇಸರಾದೀತು ಎಂದು ಕಣ್ಣಿನ ರಪ್ಪೆಯನ್ನ ಮುಚ್ಚುತ್ತಾ ತೆರೆಯುತ್ತಾ ನಿಂತಿರಲು ಮಗನು ಅದನ್ನು ಗಮನಿಸಿ ಉಲಿದ.

"ಅಪ್ಪಾಜಿ ಕಣ್ಣಿಗೇನಾದರೂ ಬಿತ್ತೆ?"

"ಇಲ್ಲ.... ಮಗು". ಎಂದು ಕಣ್ಣನ್ನು ತೀಡಲಾರಂಭಿಸಿದರು.

"ಮತ್ತೇಕೆ ಕಣ್ಣನ್ನು ಹೀಗೆ ತಿಕ್ಕುತ್ತಿದ್ದೀರಿ?"

"ಏನೋ ಬಿದ್ದ ಹಾಗಾಯಿತು. ಏನೂ ಇಲ್ಲ..."

"ಸಧ್ಯ ಏನೂ ಇಲ್ಲದಿದ್ದರೆ ಉತ್ತಮವಾಯಿತು"

ಸುವರ್ಣ ಭಟ್ಟರು ಉತ್ಸಾಹದ ದನಿಯಲ್ಲಿ ಮಾತನಾಡುವ ಮ ದಲ್ಲಿದ್ದರು. ಆದರೆ ಮಗನಲ್ಲೇ ಹೇಗೆ ಮಾತಾಡುವುದು ಏನೊ ಎನಿಸಿತು!

ಒಂದು ಕ್ಷಣ ಯೋಚನೆಯ ಗುಂಗಿನಲ್ಲಿ ನಿಂತರು

"ಏನು ಯೋಚನೆ ಮಾಡ್ತಾ ನಿಂತ್ರಿ ಅಪ್ಪಾಜಿ?"

"ಏನಿಲ್ಲ ಮಗು. ಮಲುಹಣಾ.... ನಿನಗೆ ಹರೆಯ ಆರಂಭವಾಗಿದ ಈ ತಾರುಣ್ಯದಲ್ಲಿ...."

"ನಿಮಗೆ ನನ್ನಿಂದೇನಾಗಬೇಕು ಹೇಳಿ ಅಪ್ಪಾಜಿ?"

"ನಾನೇ ನಿನಗೇ......."

"ಏನು ಹೇಳಿ ಅಪ್ಪಾಜಿ"

"ಮಗು ಮಲುಹಣಾ.... ನಮ್ಮ ಶೈವ ಆಚಾರದ ಪ್ರಕಾರ ನಿನಗ ಉಪನಯನ ಮಾಡಬೇಕಾಗಿದೆ."

"ಅಷ್ಟೇ ತಾನೇ ಅದಕ್ಕೇನಂತೆ ನಡೆಯಲಿ ಬಿಡಿ, ಮಾಡಿದರಾಯಿತು. ಅದಕ್ಕೆ ನನ್ನದೇನೂ ಅಭ್ಯಂತರವಿಲ್ಲ. ಅದಕ್ಕೆ ಪ್ರಶಸ್ತ ಸಮಯ ಒದಗಬೇ ಕಾದರೆ ಕಷ್ಟ. ಆದರೆ ಮದುವೆಯ ಜೊತೆ ಮುಂಜಿಯನ್ನೂ ಮಾಡಬಹುದು"

ತಂದೆಯ ಮಾತನ್ನು ಕೇಳುತ್ತಾ ಮಲುಹಣ ನಕ್ಕು--

"ಇದೇನು ನೀವು ಹೇಳುತ್ತಿರುವುದು? ನನಗಿನ್ನೂ ಹದಿನೆಂಟರ ಹರಿಯ ದಾಟಿಲ್ಲ, ಆಗಲೇ ಮದುವೆ ಎಂಬ ಸಂಕೋಲೆಗೆ ಸಿಕ್ಕಿಸಿ ಬಿಡಬೇಕೆಂದಿದ್ದೀರಾ?"

"ಮಲುಹಣಾ.... ನಾನಿರುವಾಗಲೇ ನೀನು ಸಂಸಾರಿಯಾಗಿ ಸುಖವಾಗಿ ಬಾಳುವು ದನ್ನು ಕಾಣಬೇಕು, ಎಂಬ ಆಸೆಯಲ್ಲಿದ್ದೇನೆ. ಆ ಆಸೆಯನ್ನು ಕಡಿಯಲೆತ್ನಿಸಬೇಡ"

ಭಟ್ಟರ ಮಾತಿನಲ್ಲಿ ಆಕಾಂಕ್ಷೆ ತಾಂಡವವಾಡುವಂತಿತ್ತು.

ಮಲುಹಣನು ಮಾತು ಮುಂದೆ ಬೆಳೆಯುವುದಕ್ಕೆ ಅವಕಾಶ ಕೊಡಲಾರದೆ ಮೇಲೆದ್ದು--

"ನಡೆಯಿರಿ ಅಪ್ಪಾಜಿ.... ನಾನು ಮೊದಲು ಸ್ನಾನ ಪೂಜೆ ಮಾಡಿಕೊಂಡು ಬಂದುಬಿಡುತ್ತೇನೆ. ವಿಜಯೇಶ್ವರನ ಪ್ರಸಾದವನ್ನು ಇಬ್ಬರೂ ತೆಗೆದುಕೊಳ್ಳೋಣ."

"ಹೌದು ಹೌದು.... ನಾನು ಯಾವ ಯಾವ ಮಾತನ್ನೂ ಆಡುತ್ತಾ ನಿನ್ನ ನಿತ್ಯ ಕರ್ಮಕ್ಕೆ ಅಡ್ಡಿಯಾಗಿಬಿಟ್ಟೆನಲ್ಲಾ?"

ಎಂದು ಎದ್ದು, "ನಡೆ ಮಗೂ...." ಎಂದು ಹೇಳಿ ಮನೆಯೊಳಕ್ಕೆ ಹೊರಡುವ ಹೊತ್ತಿಗೆ ಕೇಶವಭಟ್ಟರು ಬಂದು--

"ಮಲುಹಣದೇವರು... ಬನ್ನಿ ಸ್ನಾನಕ್ಕೆ ಅಣಿ ಮಾಡಿದ್ದೇನೆ"

"ಆಗಲೀ.... ಬಂದೇ" ... ಎಂದು ಅಲ್ಲಿಂದ ಅಡಿಯಿಟ್ಟ ಆತನ ಜತೆ.

ಸುವರ್ಣಭಟ್ಟರು ಶಿವಪ್ರಸಾದವನ್ನು ಮಗನ ಕೋಣೆಯ ದುಂಡು ಮೇಜಿನ ಮೇಲಿಟ್ಟು ಕೋಣೆಯತ್ತ ದೃಷ್ಟಿ ಹರಿಸಿದರು. ತಾಳೆಯೋಲೆಗಳ ಕಟ್ಟುಗಳು, ಮಂಚದ ಮೇಲೆ ಕಪಾಟಿನಲ್ಲಿ ಸಂಸ್ಕೃತ, ರಾಮಾಯಣ, ಮಹಾಭಾರತ, ಭಾಗವತ, ಭಗವದ್ಗೀತೆ, ಹದಿನೆಂಟು ಪುರಾಣಗಳು ಜೋಡಿಸಿ ಓದಲು ಅಣಿಯಾಗಿದ್ದುವು. ಮಂಚದ ಪಕ್ಕದಲ್ಲಿ ಒಂದು ಕಟ್ಟು ಇತ್ತು. ಅದು 'ವಾತ್ಸಾಯನ ಕಾಮಸೂತ್ರ' ಅದನ್ನು ನೋಡಿ--

ನನ್ನ ಮಗ ಎಲ್ಲಾ ಶಾಸ್ತ್ರ ಪುರಾಣಗಳಷ್ಟರಲ್ಲೇ ಪರಿಣತನಲ್ಲ. ಕಾಮ ಶಾಸ್ತ್ರ ಕಲಾ ಪಂಡಿತನಾಗುತ್ತಿದ್ದಾನೆ. ಎಂಬ ಹೆಮ್ಮೆಯ ಜೊತೆಗೆ, ಹೃದಯಕ್ಕೆ ಆನಂದಪೂರಕವಾಯಿತು. ಕೂಡಲೇ ಮತ್ತೊಂದು ಮನಸ್ಸು ಕಲ್ಪಿಸಿತು.

"ಎಷ್ಟೇ ಆಗಲಿ ನವ ಹರೆಯದ ಯುವಕ. ವಯಸ್ಸಿಗೆ ಸಹಜವಾದ ಬುದ್ಧಿಯೇ ಬಂದಿದೆ, ಜೊತೆಗೆ ರಸಿಕ, ಕವಿ, ಇಷ್ಟಾದಮೇಲೆ ಕಾಮ ಶಾಸ್ತ್ರದ ಜ್ಞಾನ ಅವಶ್ಯವೇ ಆಗಿದೆ."

ಕೋಣೆಯ ಸುತ್ತ ವೀಕ್ಷಿಸಿದರು. ಮನೆಯ ಹೊರಗೇನು ಒಳಗೂ ವಸತ ವಾಸ ಮೂಡಿ ಬಂದಂತಾಗಿತ್ತು. ಮಲುಹಣನ ಕೋಣೆಯು ಕವಿ ಕಲ್ಪನಾ ವಿಕಾಸಕ್ಕೆ ಇಂಬು ಕೊಡುವಷ್ಟು ಅಲಂಕೃತವಾಗಿಯೂ ವಿಲಾಸ ತುಂಬಿಯೂ ಇತ್ತು. ಇನ್ನು ರತಿ ವಿಲಾಸ ತಿಳಿಸುವ ಚಪಲ ಆತನಿಗೆ ಬಾರದೇ?

ಅಷ್ಟು ಹೊತ್ತಿಗೆ ಸ್ನಾನ-ಪೂಜೆ ಮುಗಿಸಿ ನೊಸಲಿಗೆ ವಿಭೂತಿ ಹಚ್ಚಿ ಮಲುಹಣ ಬರುತ್ತಿರಲು ಸುವರ್ಣಭಟ್ಟರು

"ಮಗೂ... ಪ್ರಸಾದ ತೆಗೆದುಕೋ" ಎಂದು ತೋರಿದರು.

ಮೇಜಿನ ಮೇಲಿಟ್ಟಿದ್ದ ಪ್ರಸಾದವನ್ನು ಮುಟ್ಟುತ್ತಿದ್ದಂತೆಯೇ ಕಾಮ ಶಾಸ್ತ್ರದ ಹೊತ್ತಿಗೆಯ ಕಟ್ಟು ಇದ್ದುದನ್ನು ಕಂಡು ಅದನ್ನು ಕಾಣದಂತೆ ಮೇಲಿಟ್ಟು, ಪ್ರಸಾದ ತೆಗೆದುಕೊಂಡ.ತಂದೆ ಅದನ್ನು ನೋಡಿ ಮುಗುಳ್ನಗುತ್ತಾ ಆತನ ಕೋಣೆಯಿಂದ ಹೊರಟರು. ಮಲುಹಣ ತಂದೆ ಎಲ್ಲಿ ಆ ಕಟ್ಟನ್ನು ನೋಡಿದರೋ ಎಂಬ ಅಳುಕಿನಿಂದ ಸ್ವಲ್ಪ ಹೊತ್ತು ಯೋಚಿಸಿ ಸುಮ್ಮನಾದ.

ಚಿಮಿಣಿ ಎಣ್ಣೆಯ ದೀಪದ ಪ್ರಕಾಶವು ಕೋಣೆಯನ್ನೆಲ್ಲಾ ಆವರಿಸಿತ್ತು. ರಾತ್ರಿಯೆಲ್ಲಾ ಸುವರ್ಣಭಟ್ಟರಿಗೆ ಮಗನ ಹಿತಚಿಂತನೆಯೇ ಆಯಿತು. ಕೇಶವಭಟ್ಟರು ಊಟ ವನ್ನು ತಂದಿಟ್ಟಿದ್ದುದು ಹಾಗೆಯೇ ಆರಿ ಅತ್ತಿ[illegible] ಗಿದ್ದಿತು. ಮತ್ತೆ ಬಂದು ಹಾಲು ಹಣ್ಣು ತಂದಿಟ್ಟ. ಊಟವನ್ನು ಮಾಡದೆ ಹಾಗೆಯೇ ಇರುವುದನ್ನು ನೋಡಿ--

"ಇದೇಕೆ ಸ್ವಾಮಿ ಇನ್ನೂ ಊಟವನ್ನೇ ಮಾಡಿಲ್ಲ....?"

"ಏಕೋ ಹೊಟ್ಟೆಗೆ ಬೇಕಿಲ್ಲವೆನಿಸಿತು, ಹೋಗಲಿ ತೆಗೆದುಕೊಂಡು ಹೋಗಿ"

"ಈ ಹಾಲು ಹಣ್ಣಾನ್ನಾದರೂ ತೆಗೆದುಕೊಳ್ಳಿ"

"ಆಗಲಿ ನೀವು ಹೋಗಿ"

ಮಾತಿಲ್ಲದೆ ಭಟ್ಟರು ಅವರ ಕೋಣೆಯಿಂದ ಮೆಲ್ಲನೆ ಹೆಜ್ಜೆ ಇಟ್ಟರೆ ಹಾಲು ಉಷ್ಣವಲ್ಲನೆಲ್ಲಾ ಅಳಿದು ಕೆನೆಗಟ್ಟಿ ಒಂದು ಪದರ ಮೇಲೆ ನಿಂತಿತು ಕತ್ತರಿಸಿ ಇಟ್ಟಿದ್ದ ಸೇಬು ಕಂದುಬಣ್ಣವಾಗಿತ್ತು. ಭಟ್ಟರಿಗೇಕೋ ಒಂದೂ ಬೇಕಿಲ್ಲವಾಯಿತು. ಮಗನಿಗೆ ಈ ತುಂಬು ಹೃದಯದಲ್ಲಿ ಮದುವೆ ಮಾಡಿ ಬಿಡಬೇಕು. ಇಲ್ಲದಿದ್ದರೆ ಆತನು ವೇಶ್ಯಾ ಸಹವಾಸ ಮಾಡಿದರೂ ಮಾಡ ಬಹುದು. ಅಲ್ಲಿಗೆ ನಾನು ಇಷ್ಟು ದಿನ ಜೋಪಾನವಾಗಿ ನೋಡಿಕೊಂಡು ಬಂದುದು, ಸಾಕಿ ಸಲುಹಿದುದು ನೀರಿನಲ್ಲಿ ಹೋಮ ಮಾಡಿದಂತೆ ವ್ಯರ್ಥ ವಾಗುವುದು ಎಂದುಕೊಂಡೇ ಮಲಗಿದರು. ಹೇಗೆ ರಾತ್ರಿ ಕಳೆಯುತ್ತೋ ಎಂದು ಹೊರಳಾಡಿದರು. ಹೊರಗಡೆ ಹಿಮವು ಸತತವಾಗಿ ಬೀಳುತ್ತಲೇ ಇತ್ತು. ಅಗ್ಗಿಷ್ಟಿಕೆಯಲ್ಲಿನ ಬೆಂಕಿಯ ಕಾವು ಮೈಗೆ ಹಿತವಾಗಿತ್ತು. ಅದರ ಜೊತೆಗೆ ಕಂಬಳಿಯನ್ನು ಹೊದ್ದು ಮಲಗಿದರು. ಹೇಗೋ ಬೆಳಗಾಯಿತು. ನಿದ್ದೆಯಿಂದ ಎದ್ದು ಬರುವ ಹೊತ್ತಿಗೆ ಮಲುಹಣನೂ ಅತ್ತಿಂದ ಬರುತ್ತಿದ್ದ. ಅದನ್ನು ಗಮನಿಸಿದ ತಂದೆ--

"ಮಲುಹಣಾ... ಇದೇನು ಕಣ್ಣೆಲ್ಲಾ ಕೆಂಪಾಗಿದೆ?"

"ಯಾವುದೋ ಪುಸ್ತಕವನ್ನು ಓದುತ್ತಾ ಇದ್ದೆ. ಸಮಯ ಕಳೆದುದೇ ಗೊತ್ತಾಗಲಿಲ್ಲ. ಹೊತ್ತಾದಮೇಲೆ ದೀಪವನ್ನು ಕಡಿಮೆ ಮಾಡಿ ಮಲಗಿದೆ. ಅದಕ್ಕಿರಬೇಕು"

ಮಗನು ಇದನ್ನು ಹೇಳುತ್ತಿದ್ದಾಗ ಯಾವ ಪುಸ್ತಕವೆಂಬುದು ಸುವರ್ಣಭಟ್ಟರಿಗೆ ಗೊತ್ತಾಗದೇ ಇಲ್ಲ. ಆದರೂ ಮರು ಪ್ರಶ್ನೆ ಹಾಕಿದರು-

"ಯಾವ ಪುಸ್ತಕ? ಯಾಕೆ ಅಷ್ಟು ಹೊತ್ತು ಓದಬೇಕು. ಒಳ್ಳೆಯ ಓದುಗಾರಿಕೆಯಾಯ್ತು? ಅಷ್ಟು ಬೇಗ ಓದಿ ಮುಗಿಸುವ ಆತುರವೇನಿತ್ತು?"

ಮಲುಹಣನಿಗೆ ಮಾತು ತೊದಲಿತು. ತಂದೆಯವರು ಕಾಮ ಸೂತ್ರ ಕಟ್ಟನ್ನು ನೋಡಿರಬಹುದೆಂದು ಅನುಮಾನಿಸಿದ. ಶುಷ್ಕ ನಗುವನ್ನು ಬೀರಿ

"ಶಿವ ಪುರಾಣವನ್ನು ಓದುತ್ತಿದ್ದೆ... ಜತೆಗೆ ಇನ್ನೂ ಯಾವುದೋ ಓದುತ್ತಿದ್ದೆ"

ಮಗನು ಸುಳ್ಳು ಹೇಳಲು ಇಷ್ಟಪಡದೆ, ಜಾಣತನದ ಉತ್ತರವನ್ನಿತ್ತಿದ್ದು ಸಂತಸವಾಗಿ ಮರು ಪ್ರಶ್ನೆ ಹಾಕಲು ಮನಸ್ಸು ಆಗಲಿಲ್ಲ.

ಸುವರ್ಣಭಟ್ಟರು ಮಾತಿನ ದಾಟಿಯನ್ನು ಬದಲಾಯಿಸಿ-

"ಮಲುಹಣಾ... ಶಿವರಾತ್ರಿ ಹಬ್ಬ ಇನ್ನೇನು ಹತ್ತಿರ ಬಂತು. ಇ ವಿಜಯೇಶ್ವರನ ಜಾತ್ರೆ ಆರಂಭವಾಗುತ್ತೆ. ಕಾಶ್ಮೀರದ ಪ್ರಕೃತಿಯು ಇ ಜನರನ್ನು ಆಕರ್ಷಿಸುವುದು. ಈ ಸೌಂದರ್ಯವನ್ನು ಸವಿಯಲೂ, ವಿಜಯೇಶ್ವರನ ಜಾತ್ರೆಗೆ ಕರ್ಣಾಟಕ, ಕೇರಳ, ಆಂಧ್ರ, ಗುಜರಾತ್ ಮಹಾರಾಷ್ಟ್ರ, ಬಂಗಾಳ, ಸಿಂಹಳ ಮುಂತಾದ ದೇಶಗಳಿಂದ ಜನ ಬಂ ಸೇರುತ್ತಾರೆ"

"ಅದಕ್ಕೆ ಈಗೇನು ಮಾಡಬೇಕೆಂದಿರುವಿರಿ ಅಪ್ಪಾಜಿ?"

"ನಿನಗೆ ಯಾವ ಕನ್ಯೆ ಬೇಕೋ ಅದನ್ನು ನೋಡು, ಅದೇ ಒಂ ಉತ್ತಮ ಸಮಯ, ಕಾನ್ಯಾನ್ವೇಷಣೆಗೆ ನಿನಗಿಷ್ಟ ಒಪ್ಪುವ ರಾಜ್ಯದ ಕು ಯನ್ನು ಮದುವೆ ಮಾಡಲು ಪ್ರಯತ್ನಪಡುವೆ, ಅಲ್ಲದಿದ್ದರೆ ಕಾಶ್ಮೀರ ಹುಡುಗಿಯನ್ನೇ ಆರಿಸುತ್ತೇನೆ ಎಂದರೂ ನನಗೆ ಸಮ್ಮತಿ."

"ನನ್ನ ಸಮ್ಮತಿಯನ್ನು ಅದೇ ಹೇಳಿದೆನಲ್ಲಾ ಅಪ್ಪಾಜಿ"

"ಹಾಗಂದರಾಗದು ಮಗು, ಒಂದು ದಿನವಿದ್ದ ಮನಸ್ಸು ಇನ್ನೊಂ ದಿನವಿರುವುದಿಲ್ಲ. ಒಂದು ದಿನದಂತೆ ಮತ್ತೊಂದು ದಿನ ಇರುವುದಿಲ್ಲ"

-- ಎಂದಾಗ ಮಲುಹಣನಿಗೆ ತನ್ನ ಹೊತ್ತಗೆಯ ನೆನಪಾಗಿ ತಂ ನೋಡಿಯೇ ಹೀಗೆ ಹೇಳುತ್ತಿರಬಹುದೆಂದು ಊಹಿಸಿ, ತಂದೆಯ ಪ್ರಶ್ನೆ ಏನುತ್ತರ ಕೊಡಬೇಕೆಂಬುದೇ ಮೌನ ತಾಳಿದನು. ಮತ್ತೆ ಮಗನನ್ನು ಬಂ ಸಲು ತಂದೆಗೂ ಇಷ್ಟವಾಗಲಿಲ್ಲ.

"ಹೋಗು ಮಗು, ಅಭ್ಯಂಗನ ಮಾಡಿ ಫಲಹಾರ ಮಾಡಿ ಸ್ವಲ್ಪ ಮಲಗಿ ನಿದ್ರಿಸು. ತಿಂಗಳ ಬೆಳಕಿನಂತಿದ್ದ ಕಣ್ಣು ಕೆಂಪಾಗಿರುವುದನ್ನು ನೋಡಿದರೆ ನನಗೆ ಗಾಬರಿಯಾಗುತ್ತದೆ?

"ಆಗಲೀ ಅಪ್ಪಾಜಿ" ಎಂದು ತಂದೆಯ ಮನಸ್ಸಿಗೆ ನೋವಾಗಬಾರದೆಂದು ಉತ್ತರವಿತ್ತು ಅಲ್ಲಿಂದ ಲಜ್ಜೆಯಿಂದ ಹೆಜ್ಜೆ ಕಿತ್ತ!

* * * ** * *

ಅಂದು ಸೋಮವಾರ ಬೆಳಗಿನ ಫಲಹಾರವನ್ನು ಮುಗಿಸಿದ ಮಲುಹಣನು ತನ್ನ ಕೋಣೆಯ ಬಾಗಿಲನ್ನು ಭದ್ರಿಸಿ ಏಕಚಿತ್ತನಾಗಿ ಕಾಮ ಸೂತ್ರ ಕಾವ್ಯ ಓದುವುದರಲ್ಲಿ ನಿರತನಾಗಿ ಕಣ್ಣಾಡಿಸುತ್ತಿದ್ದನು. ಅಷ್ಟರಲ್ಲಿ ಮಲುಹಣನ ಮಿತ್ರರಾದ ಜಯದೇವ್ ಮತ್ತು ವಿಜಯ್ ಇಬ್ಬರೂ ಬಂದು ಅವರ ತಂದೆಯನ್ನು ನೋಡಿ "ಮಲಹಣ ಇದ್ದಾನೆಯೇ?"ಎಂದರು.

"ಒಳಗೆ ಓದುತ್ತಿರಬಹುದು, ಹೋಗಿ ನೋಡಿ ಬರುತ್ತೇನೆ. ಸ್ವಲ್ಪ ಕುಳಿತು ವಿಶ್ರಮಿಸಿಕೊಳ್ಳುತ್ತಿರಿ" ಎಂದು ಆಸನಗಳನ್ನು ತೋರಿದರು.

ಇಬ್ಬರೂ ಆಸನಾರೂಢರಾದರು. ಸುವರ್ಣಭಟ್ಟರು ಅಡಿಗೆಯ ಭಟ್ಟರನ್ನುದ್ದೇಶಿಸಿ--

"ಕೇಶವ ಭಟ್ಟರೇ...."

ಒಳಗಿದ್ದ ಭಟ್ಟರು ಬಂದು--

"ಏನು ಸ್ವಾಮಿ...?" ಎಂದರು.

"ಮಲುಹಣನ ಸ್ನೇಹಿತರು, ಅವರಿಗೆ ಸ್ವಲ್ಪ ದ್ರಾಕ್ಷಾರಸ ತಂದುಕೊಡಿ"

ಭಟ್ಟರು ಕೂಡಲೇ ಒಳ ಹೊಕ್ಕರು. ಮಿತ್ರರಿಬ್ಬರೂ--

"ಇಲ್ಲಾ ಸುವರ್ಣಭಟ್ಟರೇ ಎಲ್ಲಾ ಆಯಿತು. ಸ್ವಲ್ಪ ನಿಮ್ಮ ಮಗನನ್ನು ನೋಡಿಲಕ್ಕೆ ಬಂದೆವು ಅಷ್ಟೆ."

"ಆಗಲಿ, ಪರವಾಗಿಲ್ಲ ನಮ್ಮ ಮನೆಯಲ್ಲಿ ನಿಮ್ಮ ಆತಿಥ್ಯ ಸ್ವ ನಡೆಯಲಿ, ಹೊರಗಡೆ ಚಳಿ ವಿಪರೀತವಾಗಿದೆ. ನೀವೂ ಚಳಿಯಿಂದ ಬ ದ್ದೀರಿ ಸ್ವಲ್ಪ ದೇಹ ಬೆಚ್ಚಗಾಗಲಿ ಅಂತ ನಾನು ಹೇಳ್ತಾ ಇದ್ದೇನೆ."

ಅವರ ಮಾತಿಗೆ ಇಬ್ಬರೂ ಮುಗುಳ್ನಕ್ಕರು

"ನಾನು ನೋಡಿಕೊಂಡ ಬರುತ್ತೇನೆ ಅಷ್ಟರತನಕ ನೀವು ಕು ಯುತ್ತಿರಿ..."

ಎಂದು ಎದ್ದು ಅಲ್ಲಿಂದ ಹೊರಟರು. ಆದರೆ ಮನದಲ್ಲೇ ಬ ಸಿದರು-- "ಮಗನು ಏಕಾಗ್ರ ಚಿತ್ತನಾಗಿ ಓದುತ್ತಿರಬಹುದು. ಹೇಗೆ ಆತನ ಕದಲಿಸಲಿ? ಎಂದು ಯಚಿಸಿ ಆತನ ಕೋಣೆಯ ಬಾಗಿಲಿನಿಂದ ಹೆಜ್ಜೆಯ ಹಿಂದಿಟ್ಟರು, ಮತ್ತೆ "ಮಿತ್ರರೊಡನೆ ಸ್ವಲ್ಪ ಮಾತಾಡಲಿ" ಎಂ ಹಿಂದಿಟ್ಟ ಹೆಜ್ಜೆಯನ್ನು ಮುಂದುವರಿಸಿ ಮೆಲ್ಲನೆ ಕೈ ಬೆರಳಿ ನಿಂದ ಬಾ ನ್ನು ತಟ್ಟುತ್ತಾ ಮೆಲ್ದನಿಯಲ್ಲಿ--

"ಮಲುಹಣಾ... ಮಲುಹಣಾ...." ಎಂದರು.

ತಂದೆ ದನಿಯನ್ನು ಕೇಳಿದ ಮಲುಹಣ ತಾಳೆ ಓಲೆಗಳನ್ನು ಕಟ್ಟು

"ಬಂದೆ ಅಪ್ಪಾಜಿ...... ಬಂದೆ" ಎಂದು ಕಟ್ಟಿಟ್ಟು ಚಲೀರನೆ ಎದ್ ಬಾಗಿಲು ತೆಗೆದು--

"ಏನಪ್ಪಾಜಿ?" ಎಂದ

"ಏನು ಮಾಡುತ್ತಿದ್ದೆ ಮಗು? ನಾನು ನಿನಗೆ ತೊಂದರೆ ಕೊಟ್ಟ ಓದುವುದನ್ನು ಕೆಡಿಸಿದೆನೋ?"

"ಹಾಗೇನೂ ಇಲ್ಲ ಅಪ್ಪಾಜಿ. ನಾನು ಓದಿ ಮುಗಿಸಿ ಕಟ್ಟ ಕಟ್ಟುತ್ತಿದ್ದೆ. ಏನಪ್ಪಾಜಿ?"

"ನಿನ್ನ ಮಿತ್ರರು ನಿನಗಾಗಿ ಕಾದಿದ್ದಾರೆ ಹಜಾರದಲ್ಲಿ"

"ಬಂದೆ...."

ಎಂದು ತನ್ನ ಶಾಲನ್ನು ಹೊದ್ದುಕೊಂಡು ರತ್ನಗಂಬಳಿಯ ಮೇ ಮೆಲ್ಲನೆ ಹೆಜ್ಜೆ ಇಡುತ್ತಾ ಬಂದು ಕುಳಿತ ಮಿತ್ರರ ಪಕ್ಕದಲ್ಲಿ ಆದಷ್

ಗಮನಿಸದೆ ಅವರು ದ್ರಾಕ್ಷಾರಸ ವನ್ನು ಕುಡಿಯುವುದರಲ್ಲಿ ನಿರತರಾಗಿದ್ದರು. ವಿಜಯ್ ಕುಡಿದು ಮುಗಿಸು ತ್ತಿದ್ದಂತೆಯೇ ತಲೆಯೆತ್ತಿ ನೋಡಲು ಮಲುಹಣನು ಪಕ್ಕದಲ್ಲಿ ಕುಳಿದಿದ್ದುದು ಕಂಡಿತು ಕೂಡಲೆ ಆತ--

"ಏನಯ್ಯ ಮಲುಹಣಾ ನೀನು ಬಂದಿದ್ದೆ ಗೊತ್ತಾಗಲಿಲ್ಲ"

"ನೆನೆದವರ ಮನದಲ್ಲೇ ನಾನಿದ್ದೇನೆ ಅಷ್ಟೆ"

"ನೆನೆದವರ ಮನದಲ್ಲೇ ಇರುವ ಮಹಾದೇವ ಅಂತ ಕಾಣುತ್ತೆ" ಎಂದ ಜಯದೇವ್

"ಸರಿ ಇನ್ನೂ ಆ ವಿಜಯೇಶ್ವರನನ್ನೇಕೆ ಪೂಜಿಸಬೇಕೊ ನಿಮ್ಮ ತಂದೆ" ದನಿಕೂಡಿ ಸಿದ ವಿಜಯ್.

ಹೀಗೆ ಮೂವರೂ ಮಾತಿನ ಗುಂಗಿನಲ್ಲಿರವು ಸುವರ್ಣ ಭಟ್ಟರು ಮಧ್ಯೆ ಪ್ರವೇಶಿಸಿದರು.

"ನಿಮಗೆ ಇನ್ನೊಂದು ಹೇಳಬೇಕು ಎನಿಸಿತು. ಅದಕ್ಕೆ ಬಂದೆ" ಎಂದರು ದೃಢ ದನಿಯಲ್ಲಿ.

"ಅದೇನು ಹೇಳಿ ಸುವರ್ಣ ಭಟ್ಟರೇ" ಎಂದ ವಿಜಯ್.

"ಈ ಹೊತ್ತು ಸಾಯಂಕಾಲ ನಿಮ್ಮ ತಿರುಗಾಟವಾದ ಮೇಲೆ ರಾತ್ರಿ ವಿಜಯೇಶ್ವರ ದೇವಾಲಯದಲ್ಲಿ ರುದ್ರಾಭಿಷೇಕವಿದೆ. ಖಂಡಿತ ಮೂವರೂ ಬರಬೇಕು."

"ವಿಜಯೇಶ್ವರ ಇಲ್ಲೇ ಇರುವಾಗ ಅಲ್ಲಿಗೇಕೆ ಹೋಗಬೇಕು ಭಟ್ಟರೇ?" ಎಂದು ಮೂವರೂ ಒಕ್ಕೊರಳ ಉಲಿತದಲ್ಲಿ ನಗು ತುಂಬಿದರು.

"ವಿಜಯೇಶ್ವರನನ್ನು ಹಾಗೆಲ್ಲಾ ಅನ್ನಬಾರದಪ್ಪಾ, ಬರಬೇಕು"

"ಆಗಲಿ ಭಟ್ಟರೇ ನಮ್ಮದು ತಪ್ಪಾಯ್ತು. ತಮಾಷೆಗೆ ಅಂದೆವು ಅಷ್ಟೆ" ಎಂದು ಶುಷ್ಕವಾಗಿ ನಕ್ಕರು.

ಮಗನೊಂದಿಗೆ ಮಿತ್ರರು ಸಂತೋಷವಾಗಿ ಮಾತಾಡಲೆಂಬ ಅಭಿಲಾಷೆಯಿಂದ ಸುವರ್ಣಭಟ್ಟರು ತಮ್ಮ ಕೋಣೆಗೆ ನಡೆದರು.

ಮಲುಹಣನ ತಂದೆ ಅತ್ತ ಹೊರಟಮೇಲೆ ತಮ್ಮ ಸಲಿಗೆಯ ಮಾತನ್ನು ಬೆಳೆಸಿದರು.

"ಏನಯ್ಯಾ ಕವಿ ಸೌರ್ವಭೌಮ. ಹೊರ ಪ್ರಪಂಚಕ್ಕೆ ಬರಬಾರದು ಅಂತೆಲಾ?" ಎಂದ ಜಯದೇವ್.

"ಓದಿ ಓದಿ ಕೂಚು ಭಟ್ಟನಾಗಬೇಡವಯ್ಯಾ" ವಿಜಯನ ದೃಢ ಧ್ವನಿ.ಮುಗುಳ್ನಗೆಯನ್ನೇ ಉತ್ತರವಾಗಿತ್ತ ಮಲುಹಣ. ಮತ್ತೆ ಜಯದೇವ್ ಕೆಣಕಿ--

"ಸ್ವಲ್ಪ ಹೊರ ಪ್ರಪಂಚ ಪ್ರಕೃತಿ ನೋಡಿದರೆ ಕವಿಗೆ ಇನ್ನೂ ಸ್ಫೂರ್ತಿ ಬರುತ್ತದೆ"

"ಮಂಜು... ಹೊರಗಡೆ ಶೀತ..... ತಂದೆ ಎಲ್ಲಿ ಬಿಡುತ್ತಾರೆ ಅರಗಿಣಿಯನ್ನು....."

"ಅದೇ ಮುಖ್ಯ ಕಾರಣ, ಅದು ಗೊತ್ತಿದ್ದೂ ನನ್ನನ್ನೂ ಏಕೆ ಛೇಡಿಸುತ್ತಿದ್ದೀರಿ?" ಎಂದು ಸ್ವಲ್ಪ ನೊಂದುಕೊಂಡ ಮಲುಹಣ.

"ಹಾಗಾದರೆ ನಾವೆಲ್ಲ ಮನುಷ್ಯರೇ ಅಲ್ಲವೇ? ನೀನೊಬ್ಬನೇ ಬೇರೆ ಲೋಕದಿಂದಿಳಿದು ಬಂದೆಯೇನು?" ಎಂದ ಜಯದೇವ್.

"ಅನ್ನಿ ಅನ್ನಿ... ಏನೇನು ಅನ್ನುತ್ತಿರೋ ಅನ್ನಿ... ನಾನು ಕೇಳಬೇಕಾಗಿ ಬಂದಿದೆ ಅದಕ್ಕೆ ಕೇಳುತ್ತೇನೆ"

"ಹೋಗಲಿ.... ಈಗ ಕುದುರೆ ಸವಾರಿ ಮಾಡಿಕೊಂಡು ಸ್ವಲ್ಪ ವಿಹಾರಕ್ಕೆ ಹೋಗೋಣ ಬರುತ್ತೀಯಾ ಹೇಗೆ?" ವಿಜಯ್ ಕೆಣಕಿದ.

"ಆಗಲೀ ನಡೆಯಿರಪ್ಪಾ"

ಎಂದು ಕುದುರೆ ಲಾಯಕ್ಕೆ ಬಂದ. ಬಿಳಿಯ ಅಶ್ವ ಮಲುಹಣನನ್ನು ವಾತ್ಸಲ್ಯದಿಂದ ನೆಕ್ಕಲಾರಂಭಿಸಿತು. ಕುದುರೆಯನ್ನು ಸಜ್ಜು ಮಾಡಿಕೊಳ್ಳುತ್ತಿರುವಲ್ಲಿಗೆ ಸುವರ್ಣ ಭಟ್ಟರು ಬಂದು--

"ವಿಜಯ್, ಜಯದೇವ, ಜೋಪಾನ, ಮಂಜು ಮಳೆಗಳಲ್ಲಿ ಸರಸವಾಡಲಿಕ್ಕೆ ಹೋಗಬೇಡಿ ಮೆಲ್ಲನೆ ಊರ ಸುತ್ತ ಸುತ್ತಿಕೊಂಡು ದೇವಸ್ಥಾನದ

ಹತ್ತಿರಕ್ಕೆ ಬಂದು ಬಿಡಿ ಜೋಪಾನ, ಮಲುಹಣಾ ಶಾಖವಾಗಿ ಬಟ್ಟೆಯನ್ನು ಹಾಕಿಕೋ ಶೀತ ಗಾಳಿ ಬೀಸುತ್ತಿದೆ"

ಎನ್ನಲು ಆತ ತಲೆದೂಗಿ ಎಲ್ಲವನ್ನು ಅಣಿ ಮಾಡಿಕೊಂಡು ಬಂದು ಮಿತ್ರರೊಡನೆ ಹೊರಟ. ಮೂವರೂ ಹೋಗುವುದನ್ನು ನೋಡುತ್ತಾ ನಿಂತರು ಸುವರ್ಣ ಭಟ್ಟರು, ವಿಜಯ ನಗುತ್ತಾ--

"ಜೋಪಾನವಾಗಿ ನಡೆ ಮಗು" ಎನ್ನುತ್ತಾ ಹೊರಟ.

❋ ❋ ❋ ❋

ಊರಿನ ಹೊರಗಡೆ ಹೋಗುತ್ತಿದ್ದಂತೆಯೇ ಒಂದು ಸುಂದರ ಮನೆಯು ಕಣ್ಣಿಗೆ ಬಿತ್ತು, ಅರಮನೆಯನ್ನೂ ಒಂದು ಕೈ ಮೀರಿಸುವಂತಿತ್ತು. ಅದರ ಅಂದ ಮಲುಹಣನ ಮನವನ್ನು ಸೂರೆಗೊಂಡಿತು. ಹಾಗೆಯೇ ಕುದುರೆಯ ವೇಗವನ್ನು ಕಡಿಮೆ ಮಾಡಿ ಸುತ್ತ ಕಣ್ಣು ಹೊರಳಿಸಿ ನೋಡಲಾರಂಭಿಸಿದ.

ಸುತ್ತಲೂ ಮಂಜು ತುಂಬದ ಬಿಳಿಯ ಮಾಟ ಗುಡ್ಡಗಳು. ಅದರ ಮಧ್ಯೆ ಕಲ್ಲು ಕಟ್ಟಡದ ಉಪ್ಪರಿಗೆಯ ಮನೆ. ಆದರಿಸಿ ಸುಸ್ವಾಗಿಸುವಂತೆ ತೂಗಿ ಹಾರುವ ಬಣ್ಣ ಬಣ್ಣದ ತೆಳುವಾದ ಪರದೆಗಳು, ಮನೆ ಸುತ್ತ ಅಂದವಾದ ಹೂ ಗಿಡಗಳು, ಪ್ರಶಾಂತವಾದ ಸ್ಥಳದಲ್ಲಿ ಇಷ್ಟೊಂದು ಸುಂದರವಾದ ಸೌಧವನ್ನು ಕಟ್ಟಿ ವಾಸಿಸುವವರು ಯಾರ ಕವಿಗಳೋ, ಕಲಾವಿದರೋ, ಧನಿಕರೋ ಇರಬೇಕು ಎಂದು ಉಗುಳು ನುಂಗಿದ.

ಯೋಚನೆ ಮಾಡುತ್ತಾ ಮತ್ತೆ ಆ ಸೌಂದರ್ಯವನ್ನು ನೋಡಲನುವಾಗುತ್ತಿರಲು ದ್ರಾಕ್ಷಿಯ ಲತಾಮಂಟಪದಿಂದ ಯಾವುದೋ ಹಿತ ಭಂಗಿಯಲ್ಲಿ ನಿಂತಿದ್ದ ಷೋಡಶಿಯ ಅಂಗ ಸೌಷ್ಟವ, ಮಲುಹಣನ ಸಣ್ಣ ಕಣ್ಣೊಂಬೆಯನ್ನು ಪ್ರವೇಶಿಸಿತು. ಕಾಶ್ಮೀರದ ಸುಂದರ ಹುಡುಗಿ, ಕೆಂಬಣ್ಣದ ಮೈಗೆ ಬಿಳಿಯ ರೇಷ್ಮೆಯ ನೀಳ್ಳುಪ್ಪಸ, ಕಾಲನ್ನು ಮುಚ್ಚಿದ ಬಿಗಿ ಪೈಜಾಮು,

ಬಿಳಿಯ ಶ್ರುವಾಲು, ಮೈಮೇಲೆ ಶೋಭಿಸುವ ಆಭರಣಗಳು, ಅದೊ
ದಿನ ಕಾಮಸೂತ್ರದಲ್ಲಿ ಓದಿದ ಚಿತ್ರದ ಕಲ್ಪನೆ ಇಂದು ಕಣ್ಣೆದುರು ಕ
ತಾಯಿತು.

ಪೌರ್ಣಿಮೆಯ ಚಂದಿರನ ಮೊಗ. ಮೈ ಕೈಗಳಲ್ಲಿ ಹಿತ-ಮಿತ
ಮಾಂಸ ಖಂಡ, ನುಣ್ಣನೆಯ ತಾವರೆಯಂಥ ಮೈಕಾಂತಿ, ಆಕ
ಬೊಗಸೆ ಗಣ್ಣಗಳು! ತುಸು ಹೊತ್ತಿನಲ್ಲೇ ಆಕೆ "ಸರೋಜ" ಎಂದಳು. ಆ
ಕೋಗಿಲೆಯ ದನಿಯಲ್ಲಿ ಇಂಪು ತುಂಬಿತ್ತು. ಕೂಡಲೇ ತರುಣಿಯ ಚಂ
ನಯನಗಳು ಹೊರಗಡೆ ಬಿಳಿಯ ಅಶ್ವದ ಮೇಲೆ ಕುಳಿತು ನೋಡುತ್ತಿ
ತರುಣನ ಮೇಲೆ ಬಿತ್ತು, ಅದವರೆವಿಗೂ ಅನೇಕ ಪುರುಷರನ್ನು ನೋ
ದ್ದಳು. ಆದರೆ ಆ ಆಕರ್ಷಕ ರೂಪನ್ನು ಹಿಂದೆಂದೂ ನೋಡಿರಲಿ
ಎವೆಯಿಕ್ಕದೆ ನೋಡಲಾರಂಭಿಸಿದಳು. ಲಜ್ಜೆಯಿಂದ ಔಡುಗಚ್ಚಿ
ಗೊಳಗೆ ನಗೆಯಾಡಿದಳು. ಆ ಮನ್ಮಥನಂಥ ಹರೆಯದ ಪುರುಷ
ನೋಡಿ ಚಂಚಲಚಿತ್ತಳಾಗಿದ್ದಳು. ಇದನ್ನು ನೋಡಿದ ಸ್ವರೂಪ್, ಸರೋ
ಇಬ್ಬರು ಕೆಳದಿಯರೂ ಓಡಿ ಬಂದು ಪುಟ್ಟ ತಾವರೆಯ ಕೊಳದ ಅಂಚ
ಕುಳಿತಿದ್ದ ಮಲುಹಣೆಯ್ನು ನೋಡಿದರು, ಅವರು ಬಂದಕೂಡಲೇ ಮ
ಹಣೆ ದೃಷ್ಟಿಯನ್ನು ಕೆಳಗಿಳಿಸಿ ನೀರಿನ ದರ್ಪಣದಲ್ಲಿ ತನ್ನ ರೂಪನ್ನು ನೋ
ಲಾರಂಭಿ ಸಿದನು. ಅದನ್ನು ಅರಿತ ಸರೋಜ್--

"ಮಲುಹಣೇ ಯಾವ ಮನ್ಮಥನ ಕನಸು ಕಾಣುತ್ತಿರುವೆ?"

ಬೆಚ್ಚಿದಾಕೆ,

"ಏನೂ ಇಲ್ಲ.... ಏನೂ ಇಲ್ಲ...." ಮಾತನ್ನು ಮುಚ್ಚಿಸುವ
ಯಡಗಿತ್ತು ಆಕೆಯ ಸೊಲ್ಲಿನ ಮೋಡಿಯಲ್ಲಿ.

ತಾವರೆಯ ಹೂವೊಂದನ್ನು ಕಿತ್ತು ಮುಖುದುವಾಗಿ ಕೆನ್ನೆಗೆ ತಾ
ವಾಗ

"ಹಾಯ್...."ಎಂದು ಕಣ್ಮುಚ್ಚಿದಳು.

"ಏಯ್ ಕಳ್ಳಿ ಗೊತ್ತು ನಿನ್ನ ಆಟ.... ಏಕೆ ಒಂದು ತರಹವಾದೆ? ನಿನ್ನ ರತಿಯ ರೂಪ ನೀರಿನಲ್ಲಿ ವಿಲೀನವಾಯಿತೆಂತಲೇ?"

"ಹಾಗೇನೂ ಇಲ್ಲವಲ್ಲ"

ಇಬ್ಬರು ಕೆಳದಿಯರೂ ನಕ್ಕರು. ಅದನ್ನು ನೋಡಿ ಮಲುಹಣನು ಬೆಚ್ಚಿ ಹೊರಡಲನುವಾದನು, ಅಷ್ಟು ಹೊತ್ತಿಗೆ ಜಯದೇವ್ ಮತ್ತು ವಿಜಯ್ ಹಿಂತಿರುಗಿ ಬರುತ್ತಿರುವುದು ಕಂಡಿತು. ಮಲುಹಣನು ಅದನ್ನು ಮರೆಯಿಸಲು ಅಶ್ವವನ್ನು ವೇಗವಾಗಿ ಓಡಿಸಲಾರಂಭಿಸಿದ. ಆಕೆಯ ನೋಟ ಮರೆಯುವಂತಿರಲಿಲ್ಲ. ಆದರೆ ಹೋಗದೆ ಗತ್ಯಂತರವಿಲ್ಲ. ಸ್ವರೂಪ್ ಸರೋಜ್ ಅದನ್ನು ನೋಡಿ ಕಿಲಕಿಲನೆ ನಗುತ್ತಾ..

"ಮಲುಹಣೇ...ನಿನ್ನ ಮನ್ಮಥ ಹೊರಟುಹೋದ. ಹೋಗಿ ಹಿಡಿದು ಕೊಂಡು ಬಾ" ಎನ್ನುತ್ತಿರಲು ಆಕೆ ದೃಷ್ಟಿ ಆತನಲ್ಲಿ ಸಂಪೂರ್ಣವಾಗಿ ನಾಟಿತ್ತು. ಮತ್ತೆ ಸ್ವರೂಪ್ ಛೇಡಿಸುವ ದನಿಯಲ್ಲಿ...

"ಬಾ...ಮಲುಹಣೇ...ಬೇಕಾದರೆ ಪಾರಿವಾಳದಿಂದ ಸುದ್ದಿ ಮುಟ್ಟಿಸು ವೆಯಂತೆ"

"ಹೋಗ್ರೇ...ನಿಮಗೆ ಯಾವಾಗಲೂ ಇದೇ"...ಎಂದು ಮುಖ ಸೊಟ್ಟ ಮಾಡಿಕೊಂಡಳು. ಆದರೆ ಮನದಲ್ಲೇ ಹಿರಿ ಹಿಗ್ಗಿದಳು. ಆತನ ನೋಟ ಮರೆಯದೆ ಅಚ್ಚಳಿಯ ದಂತೆ ಮನದಲ್ಲಿ ಉಳಿಯಿತು. ದಾರಿಯಲ್ಲಿ ಹೋಗುತ್ತಾ ವಿಜಯ್ ಮತ್ತು ಜಯದೇವ್ ಮಲುಹಣನನ್ನು ತರಾಟೆಗೆ ತೆಗೆದುಕೊಳ್ಳದೇ ಇರಲಿಲ್ಲ.

"ಏನಯ್ಯಾ ನಾವಿಬ್ಬರೂ ನಿನ್ನೊಂದಿಗೆ ಮಾತನಾಡಿಕೊಂಡೇ ಒಂದು ಹರಿದಾರಿ ದೂರ ಸಾಗಿದೆವು. ಆದರೆ ಮಾತಾಡಿಕೊಂಡಿದ್ದು ನಾವಿಬ್ಬರೇ ಹೊರತು, ನಿನಗಲ್ಲ. ನಿನ್ನ ಸ್ವರವೇ ಇಲ್ಲದಿರಲು ಮತ್ತೆ ಹಿಂತಿರುಗಿ ನೋಡು ತ್ತೇವೆ. ನಿನ್ನ ಸುಳಿವೇ ಇರಲಿಲ್ಲ. ಮತ್ತೆ ಅಲ್ಲಿಗೇ ಹಿಂತಿರುಗಿ ಬಂದೆವು. ಅದಾವುದೋ ದೃಶ್ಯ ಕಣ್ಣಿಗೆ ಹಿತವಿತ್ತು. ಅದನ್ನು ನೋಡುತ್ತಾ ನಿಂತುಬಿಟ್ಟೆ?"

"ಪ್ರಕೃತಿ "

"ಪ್ರಕೃತಿಯೋ ಅಥವಾ ಮಧ್ಯದಲ್ಲಿನ ಪ್ರಕೃತಿ ದೇವಿಯೋ ?"

"ಹಾಗೇನೂ ಇಲ್ಲ ನಡೆಯಿರಿ...ನಡೆಯಿರಿ" ಎಂದು ಮೆಲ್ಲ ಅಶ್ವಗಳನ್ನು ನಡೆಸಿಕೊಂಡು ಹೊರಟರು.

"ಅಲ್ಲ ಆ ಮನೆಯ ಮುಂದಿನ ಪ್ರಕೃತಿ ಇನ್ನೇನಿರಬೇಕು ?"

"ಆದಕ್ಕೆ ನೀನು ಮತ್ತೆ ಮತ್ತೆ ಹಿಂತಿರುಗಿ ನೋಡಿಕೊಂಡು ಬರು ತ್ತಿದ್ದೀಯೆ ?"

" ಆ ಸ್ವಾರಸ್ಯವನ್ನೇ ನೋಡುತ್ತಾ ನಿಂತಿದ್ದೆ"

"ಹೇಗಿದ್ದಾಳೆ ರತಿ ?"

"ಆರತಿ ಎತ್ತುವಂತಿದ್ದಾಳೆ ಆ ರತಿ. ಆಕೆಯನ್ನು ವರ್ಣಿಸಲಸದಳ"

"ಆಕೆ ಯಾರು ಗೊತ್ತೇನು ?"

"ಯಾರು ?"

"ಭಾರತಿ ಪೀಠಕ್ಕೆ ಅದಿದೈವವೆನಿಸಿದ ವಿಜಯೇಶ್ವರನ ದಾಸಿ. ಚಿತ್ತ ತರ ಮಧುರಮಯ ನಾಟಕ ಕಲಾವತಿ ಎಂದೆನಿಸಿದ ವೇಶ್ಯೆ ಪದ್ಮಾವತಿಯ ಓರ್ವಳೇ ಮಗಳು ಮಲುಹಣೆ"

"ವೇಶ್ಯೆ...."

ತನ್ನ ಮನಸ್ಸಿನಲ್ಲಿಯೇ ಆಕೆಯ ಗುಣವನ್ನು ಲೆಕ್ಕ ಹಾಕಿದ. ಷೋಡಶಿಯ ವೇಶ್ಯಾ ಎಂಬ ಎರಡಕ್ಷರದ ಮರದ ಬೇರು ಸಹಿತ ಕಿತ್ತು ಶಿರೋಮಣಿಯಂತೇಕೆ ಬಾಳಬಾರದು ? ನಡೆದುಕೊಳ್ಳುವುದೆಲ್ಲಾ ನಮ್ಮ ಕೈಯಲ್ಲೇ ಇದೆ. ನಮ್ಮ ನಡತೆಯ ಮೇಲೆ ಹೊಗುತ್ತದೆ ನಮ್ಮ ಕುಲ."

"ಏನಯ್ಯಾ ಯೋಚಿಸುತ್ತಿದ್ದೀಯೆ ?"

" ಆ ರತಿಯನ್ನು ವರಿಸಲು ಅದಾವ ಮನ್ಮಥ ಕಾದಿರುವನೋ ?"

"ಈಗ ಈ ಮನ್ಮಥನೇ ಕಾಯುತ್ತಿದ್ದೀಯಲ್ಲಾ ?" ಎಂದು ಮುಗು ಳ್ನಕ್ಕ ಜಯದೇವ್.

"ರಾತ್ರಿಯೆಲ್ಲಾ ಆಕೆಯ ಕನಸಿನಲ್ಲಿ ಕುಣಿಯಬಹುದು" ಎಂದ ವಿಜಯ್.

"ನಿಮ್ಮ ತಂದೆಗೆ ಹೇಳೋಣವೇ ?"

"ನೀನೊಳ್ಳೆ ಮಾತಾಡ್ತೀಯೆ ಜಯದೇವ. ಧನಿಕರೂ ಒಳ್ಳೆಯ ಮನೆತನದ ವಿಪ್ರರೂ ಆದ ಸುವರ್ಣಭಟ್ಟರು ಇದಕ್ಕೆ ಒಪ್ಪುತ್ತಾರೆಯೇ ? ಅವರು ತಮ್ಮ ಅಂತಸ್ತಿಗೆ ತಕ್ಕವರನ್ನೇ ಆರಿಸುತ್ತಾರೆ."

ಕೂಡಲೇ ಮಲುಹಣನು ಬಾಯಿಕ್ಕಿ....

"ನೀವೇನೂ ಮಾಡಬೇಡಿ ನಡೆಯಿರಿ ಕತ್ತಲಾಗುತ್ತಾ ಬಂತು. ಇನ್ನು ಅಶ್ವದ ಮೇಲಿನ ತಿರುಗಾಟ ಸಾಕು. ವಿಜಯೇಶ್ವರನ ದೇವಾಲಯಕ್ಕೆ ಹೋಗುವುದೇ ಮರೆತು ಹೋಯಿತೇ ?"

"ವಿಜಯೇಶ್ವರನ ದೇವಾಲಯದ ದೇವದಾಸಿಯ ಮನೆಯನ್ನು ನೋಡಿದ ಮೇಲೆ ಆ ಮಲುಹಣ ದೇವಿಯನ್ನು ಇನ್ನೇನು ಬೇಕಾಗುತ್ತದೆ ?"

" ಆ ವಿಜಯೇಶ್ವರನು ಏಕೆ ?" ಈಟುಗವಿ ಮಾತಾಡಿದ ವಿಜಯ್.

"ಹಾಗೇನೂ ಇಲ್ಲ. ಸುವರ್ಣಭಟ್ಟರು ನಮಗೆ ಕಾದಿದ್ದಾರೆ. ಹೋಗಲೇಬೇಕು ನಡೆಯಿರಿ" ಎಂದ ಜಯದೇವ್..

"ಆಗಲಿ ನಡೆಯಿರಿ ಬರೇ ಮಾತು ಬೆಳೆಸಿ ಕಾಲಹರಣವನ್ನು ಮಾಡಬೇಡಿ" ಎನ್ನಲು ಇಬ್ಬರೂ ಪಕ್ಕನೆ ನಗುತ್ತಾ ಅಶ್ವದ ವೇಗವನ್ನು ಹೆಚ್ಚಿಸಿ ವಿಜಯೇಶ್ವರನ ದೇವಾಲಯದತ್ತ ಹೊರಟರು. ಪ್ರಕೃತಿಯಲ್ಲೆಲ್ಲಾ ಹೊಸ ಚೇತನ ತುಂಬಿ ಮಲುಹಣನಿಗೆ ಸಂತಸ ಹೊರಹೊಮ್ಮಿತು.

ಸ್ವಲ್ಪ ಹೊತ್ತಿನಲ್ಲೇ ವಿಜಯೇಶ್ವರ ದೇವಾಲಯದತ್ತ ಬಂದರು. ದೇವಾಲಯದ ಮೇಲ್ಛಾವಣಿಯೆಲ್ಲಾ ಮಂಜಿನ ಗಡ್ಡೆಯಿಂದ ತುಂಬಿ ಮಂಜಿನ ಮನೆಯಂತೆ ಕಾಣುತ್ತಿತ್ತು. ಬಾಗಿಲು ತೆರೆದು ಇವರಿಗಾಗಿ ಸುಸ್ವಾಗತವನ್ನು ಬಯಸುವಂತೆ ಕಾಣುತ್ತಿತ್ತು. ವೇದ ಘೋಷದ ಮೇಲ್ದನಿಯು, ಇನಿತಿನಿತೇ ಏರುತ್ತಾ ಹತ್ತಿರ ಬರುತ್ತಾ ಜೋರಾಗಲಾರಂಭಿಸಿತು. ದೇವಾ

ಲಯದಲ್ಲಿ ಇನ್ನೇನು ಪೂಜೆ ಆರಂಭವಾಗಬೇಕು, ಇನ್ನೂ ಇಷ್ಟು ಹೊತ್ತಾಗಿ ಮಗನು ಬರಲಿಲ್ಲವೆಂದು ಸುವರ್ಣಭಟ್ಟರು ಹೊರಗಡೆ ಬಂದು ನಿಂತು ಚಾತಕ ಪಕ್ಷಿಯಂತೆ ಕಾದು ನಿಂತಿದ್ದರು. ದೂರದಲ್ಲಿ ಬರುತ್ತಿದ್ದ ಮಗನನ್ನು ನೋಡಿ ಮನದಲ್ಲಿ ಸಂತಸವಾಯಿತು. ಮೂವರೂ ಕುದುರೆ ಇಳಿದು ಒಳಗ ಬಂದರು. ವಿಜಯ ಅವರನ್ನು ಕುರಿತು,

"ಸ್ವಲ್ಪ ನಾವು ಬರುವುದು ತಡವಾಯಿತು ಕ್ಷಮ್ಸಿ"

"ಹಾಗೇನೂ ಇಲ್ಲ."

"ನಾವು ಸ್ವಲ್ಪ ತಡವಾಗಿ ಬಂದೆವೆಂದು ಬೇಸರವಾಯಿತೆ ?" ಸಮಾಧಾನಿಸುವ ದನಿಯಲ್ಲುಲಿದ.

"ಏನೂ ಇಲ್ಲ ಈಗ ತಾನೇ ಪೂಜೆ ಆರಂಭವಾಗಬೇಕಿತ್ತು. ಅದೇ ಹೊತ್ತಿಗೆ ನೀವು ಬಂದಿರಿ"

ವಿಜಯ್ ಮಾತನ್ನು ಮುದುವರಿಸುತ್ತಾ..

"ಇಷ್ಟಕ್ಕೆಲ್ಲಾ ಕಾರಣ ನಿಮ್ಮ ಮಗನೇ"

ಇನ್ನೇನು ಹೇಳಿಬಿಡುತ್ತಾನೆಯೋ ತಂದೆಯೊಂದಿಗೆ ಎಂದು ಮಾತನ್ನು ಕಡಿಸಲು ದನಿಗೂಡಿಸಿದ.

"ನಡೆಯಿರಿ ಅಪ್ಪಾಜಿ"

"ನೋಡಿದಿರಾ ? ನಡೆಯಿರಿ ಅಪ್ಪಾಜಿ ಅನ್ನುತ್ತಿದ್ದಾನೆ. ಆದರೆ ಸುಮ್ಮನೇ ಸುತ್ತಾ ನೋಡುತ್ತಾ ಪ್ರಕೃತಿಯಲ್ಲಿ ತಲ್ಲೀನನಾಗುತ್ತಿದ್ದಾನೆ"

"ಈತ ಪ್ರಕೃತಿ ಕವಿ" ಎಂದ ವಿಜಯ.

"ಇಂದು ಒಂದು ಅಂದವಾದ ಮನೆಯನ್ನು ನೋಡುತ್ತಾ ಬರುವುದರಲ್ಲೇ ತಡವಾಯಿತು. ಈಗ ದೇವಾಲಯದ ಅಂದವನ್ನು ನೋಡು ತ್ತಿದ್ದಾನೆ"

ಇನ್ನು ಮಾತು ಎಲ್ಲಿ ಮುಂದುವರಿಯುವುದೋ ಎಂಬ ಅಳುಕು ಮನದಲ್ಲಿತ್ತು. ಸುವರ್ಣಭಟ್ಟರು ದೇವಾಲಯವನ್ನು ನೋಡಿ

"ಇದು ಹತ್ತನೆಯ ಶತಮಾನದ ಮಧ್ಯ ಭಾಗದಲ್ಲಿ ಅನಂತ ಹಾಗೂ ಸೂರ್ಯ ಮತಿ ರಾಜ-ರಾಣಿಯರ ಮಗ ಕಳಸ ಮಹಾರಾಜರರು ಈ ದೇವಾಲಯವನ್ನು ಕಲ್ಲಿನಲ್ಲೇ ಕಟ್ಟಿಸಿದರು. ಅಂದಿನ ದಿನ ಶೈವ ದೇವಾಲಿಯಗಳೂ, ಮಠಗಳೂ ಅನೇಕವಾಗಿ ಕಟ್ಟ ಲ್ಪಟ್ಟವು, ನಡೆಯಿರಿ ದೇವರ ಪೂಜೆ ನಡೆಸೋಣ. ನಮಗಾಗಿ ಪೂಜಾರಿಗಳೂ ಕಾದಿದ್ದಾರೆ."

ಎನ್ನಲು, ಎಲ್ಲರೂ ಹೊರಟರು. ರುದ್ರಾಭಿಷೇಕವು ವಿಜಯೇಶ್ವರನಿಗೆ ವಿಜೃಂಭಣೆಯಿಂದ ಸಾಗಿತು. ಎಲ್ಲರೂ ಕೈ ಮುಗಿದು, ಮಂಗಳಾರತಿ, ತೀರ್ಥ ಪ್ರಸಾದಗಳನ್ನು ತೆಗೆದುಕೊಂಡು ಹೊರಟರು.

❋ ❋ ❋

ರಾತ್ರಿ ಊಟವಾದ ಮೇಲೆ ಮಲಗಿದ. ಮಧ್ಯ ರಾತ್ರಿಯಾದರೂ ಏಕೋ ನಿದ್ದೆ ಬರಲಿಲ್ಲ. ಓಲೆ ಗರಿಗಳನ್ನು ತೆಗೆದುಕೊಂಡು ನೀರಿನಲ್ಲಿ ಅದ್ದಿ ಮೇಜಿನ ಮೇಲಿಟ್ಟು ಲೇಖನಿ ಯನ್ನು ತೆಗೆದುಕೊಂಡ. "ಮಲುಹಣೆಗೆ ಪ್ರೇಮ ಪತ್ರ ವನ್ನೇಕೆ ಬರೆಯಬಾರದು?"ಎಂದು ಯೋಚಿಸಿದ.

ಹೇಗೆ ಬರೆಯುವುದು? ಕಾವ್ಯಗಳ ಶೈಲಿಯಲ್ಲಿ ಬರೆಯುವುದೋ? ಸುಲಭ ಗದ್ಯದಲ್ಲಿ ಬರೆಯುವುದೋ? ಎಂದು ಚಿಂತೆ ಕಾಡಿಸಿತು. ಸರಳ ಪದ್ಯ ದಲ್ಲೇ ಬರೆಯುವ ಯೋಜನೆ ಹಾಕಿದ. ಹೇಗೆಪ್ರಾರಂಭಿಸಬೇಕು?ಎಂದು ತಿಣು ಕಾಡಿ ಕೊನೆಗೆ ಮನಸ್ಸಿನಲ್ಲಿ ಏನೋ ಹೊಳೆಯಲು ಬರೆಯಲಾರಂಭಿಸಿದ.ಪಕ್ಕ ದಲ್ಲಿ ದೀಪ ಪ್ರಜ್ವಲಿಸುತ್ತಿತ್ತು. ಅದರ ಬೆಳಕಿನಲ್ಲಿ ಅಚ್ಚೊತ್ತಲಾರಂಭಿಸಿದ.

"ಎನ್ನರಸಿ ಚೆನ್ನರಸಿ"
ಲಾವಣ್ಯದರಸಿ,
ಬಯಸಿರುವೆ ನಿನ್ನ ರೂಪರಾಶಿ "
......."

ಸರಳ ಗದ್ಯದಲ್ಲೇ ಬರೆಯುತ್ತೇನೆ ಎಂದು ಒಂದು ಗೆರೆ ಹೊಡೆದು ಎಸೆದು ಮತ್ತೊಂದಕ್ಕೆ ಕೈಹಾಕಿ ಬರೆಯಲಾರಂಭಿಸಿದ.

"ಚಿನ್ನಾ..." ಎಂದು ಆರಂಭಿಸಿದ, ಇದು ಹಳೆಯದಾಯಿತು. "ಮನದರಸಿ" ಇದು ಅಷ್ಟೊಂದು ಪ್ರಿಯವಾದುದ "ಮಲುಹಣೀ" ಈಗಲೇ ಹೆಸರು ಬೇಡ. ಚೆಲುವೆ ಹೃದಯೇಶ್ವರಿ...ಈ ಇದು ಸ್ವಲ್ಪ ಪರವಾಗಿಲ್ಲ ಎಂದು ಪತ್ರವನ್ನು ಬರೆಯಲು ಮುಂದುವರಿ

ಮಲುಹಣೀ, ನಾನು ನಿನ್ನ ಮೊದಲನೆಯ ನೋಟಕ್ಕೆ ಸಿಕ್ಕಿ ವಿಲವಿ ಒದ್ದಾಡುತ್ತಿದ್ದೇನೆ. ನನ್ನ ಮನದಲ್ಲಾಗುವ ಪರಿವರ್ತನೆಗಳನ್ನು ಈ ಲೇ ನಿಯು ಬರೆಯಲಾರದು. ಬಾಯಿ ಬಿಟ್ಟು ಹೇಳಬೇಕೆನ್ನಿಸುತ್ತದೆ. ಆದರೆ ಅ ಸಮಯ, ಸನ್ನಿವೇಶಗಳು ಇನ್ನೂ ಬಂದೊದಗಿಲ್ಲ. ನೀನು ನನ್ನ ಹೃದಯವ ಸೂರೆಗೊಂಡಿದ್ದೀಯೆ ಅನ್ನುವುದಕ್ಕಿಂತ ಕದ್ದಿದ್ದೀಯೆ. ಆ ನಗುವಿ ಅದೆಷ್ಟು ಮಾದಕ ? ಸೊಗಸು ? ಅದು, ಕವಿಯಾದರೂ ನನ್ನ ವರ್ಣ ನಿಲುಕದುದಾಗಿದೆ. ಅಪ್ಸರೆ, ಗಂಧರ್ವೆಯರ ವರ್ಣನೆಯನ್ನು ಕಾವ್ಯಗಳ ಓದಿ ನಾನು ಕಲ್ಪಿಸಿಕೊಂಡಿದ್ದೆ. ಆದರೆ ನಿನ್ನಂಥ ಲಾವಣ್ಯರಾಶಿಯನ್ನು ನಾ ಎಂದೂ ನೋಡಿರಲಿಲ್ಲ, ನಿನ್ನ ರೂಪ ನನ್ನ ಕಣ್ಣಗಳಲ್ಲಿ ಕಟ್ಟಿದಂತಾಗಿ ಇದೇನು ಇಷ್ಟೆಲ್ಲಾ ಬರೆಯುತ್ತಾನೆ, ಇವನು ಹುಚ್ಚ ಎಂದರೂ ಅನ್ನಬಹು ಅದರೆ ಈಗ ನಿನ್ನ ವ್ಯಾಮೋಹದಲ್ಲಿ ಹುಚ್ಚನೇ ಆಗುತ್ತಿರುವೆ. ನಿನ್ನ ರೂ ಲಾವಣ್ಯ ಸವಿಯಲು ನನ್ನ ಪಂಚೇಂದ್ರಿಯಗಳೂ ಕಾತರಿಸುತ್ತವೆ. ನಿನ್ನ ಸವಿದರೆ ಅಂದೇ ನನ್ನ ಜನ್ಮ ಸಾರ್ಥಕ. ಅಲ್ಲಿಯವರೆಗೂ ನನ್ನ ಬಾ ನಿರರ್ಥಕ. ಇದು ಸಾಮಾನ್ಯ ಆಕರ್ಷಣೆಯಲ್ಲ. ಲಯಸ್ಕಾಂತಕ್ಕಿಂತ ಒ ಕೈ ಮೀರಿದುದೇ ಎಂದು ಹೇಳಬಹುದು. ನನ್ನಯೌವ್ವನದ ಮೊ ನೋಟಕ್ಕೇ ನೀನೇ ಬಲಿಯಾದೆ. ಕನಸು ಮನಸುಗಳಲ್ಲಿ ನೀನು ತುಂಬಿದ ನನಗೆ ಪ್ರಪಂಚವೇ ಬೇಡವೆನಿಸುತ್ತದೆ. ನೀನೇ ಸರ್ವಸ್ವ. ಅದಕ್ಕೀಗ ಏ ಮಾಡಲಿ ? ನಿನ್ನ ಉತ್ತರದಿಂದ ನಾನೀಗ ಮೊದಲು ತೃಪ್ತನಾಗಬೇಕಾಗಿ ಆಮೇಲೆ ಮುಂದಿನ ಭೇಟಿ.

ನಿನ್ನ ಪ್ರೇಮ ಭಿಕ್ಷುಕ,
**ಮಲುಹಣ ದೇವ.**

ಭಾವನಾ ಲೋಕದಲ್ಲಿ ಮತ್ತೆ ಈತನ ಚಿತ್ತ ಕಲಕಿತು.

"ಅಲ್ಲಾ, ನಾನೇನು ಬರೆದೆ?"

"ಏನು ಎಂದರೆ ಮನದ ಆಸೆಯನ್ನು ಪತ್ರದ ರೂಪಿನಲ್ಲಿ"

"ಏಕೆ...?"

"ಏಕೆ ಎಂದರೆ ಆಕೆಯ ಆಕರ್ಷಣೆಯಿಂದ"

"ಆಕೆಯನ್ನು ಮತಾಡಿಸಿಲ್ಲ, ಆಕೆಯೊಂದಿಗೆ ಮಾತಾಡಿಲ್ಲ ಹೇಗೆ ?"

"ಆ ಮಾತು ಪತ್ರ ರೂಪದಲ್ಲೇ ಆಗಿದೆ, ಅದರಲ್ಲೇನು ತಪ್ಪು ?"

"ಎಲ್ಲಾ ಭ್ರಮೆ "

"ಭ್ರಮೆ ಏನು ? ಅದು ನಿಜವಾಗಬಾರದೇಕೆ ? ಅದಕ್ಕೆಷ್ಟು ಕಾಲ ಬೇಕು ?"

"ಹಾಗಾದರೆ ಅದು ಸಾಧ್ಯವೇ ?"

"ಮನುಷ್ಯ ಪ್ರಯತ್ನಕ್ಕಿಂತ ದೊಡ್ಡದಿದೆಯೇ ? ಆದರ್ಶ ಪ್ರೇಮಕ್ಕೆ ಬೆಲೆ ಎಂದಾದರೂ ಇದ್ದೇ ಇರುತ್ತದೆ"

"ಆದರೆ ಅದೇ ರೀತಿಯಲ್ಲಿ ಆಕೆಯಲ್ಲೂ ಉಂಟಾಗಬೇಕಲ್ಲಾ ?"

"ಏಕಾಗಬಾರದು ? ನೀನು ಯಾವುದರಲ್ಲಿ ಕಡಿಮೆ ಇದ್ದೀಯೆ ? ರೂಪ, ಐಶ್ವರ್ಯ, ವಿದ್ಯೆ, ಯಾವುದರಲ್ಲಿ ಕೊರತೆ, ಯಾರಿಗೇನು ಕಡಿಮೆ ಯಿಲ್ಲ".

"ಅದೇನೋ ನಿಜವಿರಬಹುದು, ಆಗದಿದ್ದರೆ....?"

"ಈಗಲೇ ಹಾಗೆಂದರೆ ಹೇಗೆ ? ಪ್ರಯತ್ನ ಫಲ ಕೊಡುವ ತನಕ ಕಾದು ನೋಡಬೇಕು."

"ನೋಡುತ್ತೇನೆ....ನೋಡುತ್ತೇನೆ"

ಎಂದು ತುಟಿಯ ಮೇಲೆ ಲೇಖಣಿ ಇಟ್ಟು ಕುಳಿತ. ಕೂಡಲೇ ಲೇಖನಿಯನ್ನು ಎಸೆದು,

"ಛೀ, ಇದೇನು ಬರೆದೆ? ಇದನ್ನು ಆಕೆಗೆ ಕಳುಹಿಸುವುದೇ ? ಎಲ್ಲಿ ಯಾದರೂ ಉಂಟೇ ? ಅವಮಾನ. ಸುವರ್ಣಭಟ್ಟರ ಮಗ ವೇಶ್ಯೆಗೆ ಪತ್ರ

ಬರೆಯುವುದು ಎಂದರೇನು ?" ಬೇಡ....ಬೇಡ....ಎಂದು ಎಲ್ಲವನ್ನೂ ದೀಪದಿಂದ ಸುಟ್ಟು ದೀಪ ಆರಿಸಿ ಮಲಗಿದ.

ಮರುದಿನ ಮಲುಹಣನನ್ನು ನೋಡಲು ಮಿತ್ರರೀರ್ವರಾದ ಜಯ ದೇವ್ ಮತ್ತು ವಿಜಯ್ ಬಂದರು. ಫಲಹಾರ ಮುಗಿದಿದ್ದರೂ ಮಲು ಹಣೆಯ ಯೋಚನೆ ತಪ್ಪಿರಲಿಲ್ಲ ಮಲುಹಣನಿಗೆ, ವಿಜಯ್ ಆತನ ಸ್ಥಿತಿ ಯನ್ನು ಗಮನಿಸಿ....

"ಏನು ದೇವರು ಯೋಚನೆ ಮಾಡುತ್ತಾ ಕುಳಿತ ಹಾಗಿದೆಯಲ್ಲಾ ?"

ತಟಕ್ಕನೆ ತಲೆ ಎತ್ತಿ ಮಲುಹಣ.....

"ಏನೂ ಇಲ್ಲ ಬನ್ನಿ" ಎಂದು ಪೆಚ್ಚು ನಗು ಬೆರೆಸಿದ.

ಇಬ್ಬರೂ ಆಸನದ ಮೇಲೆ ಕುಳಿತರು. ಜಯದೇವ ಸುಟ್ಟ ತಾಳೆಯೋ ಲೆಗಳನ್ನು ನೋಡಿ..

"ಇದೇನು ಕವಿಗಳು ಬರೆದು ಉರಿಸಿದ್ದೀರಿ ?"

"ಏನೋ ಬರೆಯೋಣವೆಂದು ಹೊರಟೆ, ಅದು ಏನೋ ಆಯಿತು ಸುಟ್ಟೆ"

"ಯಾವ ಕಾವ್ಯದ ಆರಂಭ ? ಮೊದಲೇ ಅಗ್ನಿಗೆ ಆಹುತಿ ಕೊಟ್ಟು ಬಿಟ್ಟಿದ್ದೀರಿ?"

"ಅದಕ್ಕೆ ಹೆಸರಿಲ್ಲ ಕುಲವಿಲ್ಲ"

"ಅಂಥಹದ್ದೇನು ?" ಎಂದು ಸುಟ್ಟ ತಾಳೆಯೋಲೆಯೊಂದನ್ನು ವೀಕ್ಷಿಸಿ,

"ಅರ್ಥವಾಯಿತು ಬಿಡಿ" ಎಂದ ವಿಜಯ್.

"ಇದು ಶೃಂಗಾರ ಕಾವ್ಯವೋ ? ಅಥವಾ...ಪ್ರೇಮ ಪತ್ರವೋ ?"

"ಇರಬಹುದು....ಆ ಮಲುಹಣೆಗೆ ಇದೋ ಇಲ್ಲೋ ಗೊತ್ತಾಗುತ್ತೆ ಅಲ್ಲ ಇದನ್ನು ದೂತನಿಂದ ಕಳುಹಿಸದೆ ಏಕೆ ಸುಡೋಣವಾಯಿತು ?"

ಪೆಚ್ಚನಂತೆ ಕುಳಿತ ಮಲುಹಣ, ಎಲ್ಲವನ್ನೂ ನೋಡಿದರಲ್ಲಾ ಎಂದು..

"ಬರೆಯಪ್ಪಾ ಬರೆ ಚೆನ್ನಾಗಿ ಬರೆ. ಪಾಪ ರಾತ್ರಿಯೆಲ್ಲಾ ನಿದ್ದೆಯಿಲ್ಲ ಅಂತ ಕಾಣುತ್ತೆ. ಕೆಂಪಾದ ಕಣ್ಣುಗಳೇ ತೋರುತ್ತೆ...ಈ ಪ್ರೇಮ ಪತ್ರ ಬರೆಯಲಿಕ್ಕೆ"

"ಏಕಯ್ಯಾ ಮಾತಾಡದೇ ಕುಳಿತೆ ?"

"ಏನೂ ಇಲ್ಲ ವಿಜಯ್ ಸ್ವಲ್ಪ ಹಾಗೇ ತಲೆ ನೋವು"

"ಯಾವನ ಕಾಲದಲ್ಲಿ ಬೇಸರ, ತಲೆನೋವಿಗೆ ಜೋಡಿ ಬೇಕು"

"ಈಗ ನೀವೇ ಬಂದರಲ್ಲಿ" ಎಂದ ಮಲುಹಣ ನಗು ಬೆರಸಿ...

"ನಾವಲ್ಲ ಹೆಂಗಸರು" ಎಂದ.

ಮಲುಹಣ ಮಾತಾಡಲಿಲ್ಲ.

"ಯಾವ್ವನ ಕಾಲದಲ್ಲಿ ಆಗಬೇಕಾದ ಕಾವ್ಯ ಸೃಷ್ಟಿ ಆಗಲಿ ಬಿಡಿ" ಎಂದು ಉಲಿದ.

"ಅದು ವಯಸ್ಸಿನ ತಪ್ಪು" ಎಂದು ದನಿಗೂಡಿಸಿದ ಜಯದೇವ್.

"ರಾತ್ರಿ ಜೋಪಾನ" ಕೆಣಕಿದ ವಿಜಯ್.

"ಸಂಸ್ಕೃತ ಶೃಂಗಾರ ಕಾವ್ಯ ಓದಿದವರ ಗೋಳೇ ಅಷ್ಟು"

"ಮನಸ್ಸು ಬಿಗಿ ಹಿಡಿದ್ರಾಯ್ತು"

"ಅದು ಕುದುರೆ ಕಡಿವಾಣವಲ್ಲ"

" ಅಲ್ಲಾ ಸುತ್ತಾಡುವುದಕ್ಕೆ ಮೊದ್ಲುಕೊಟ್ಟಿದ್ರೆ ನಾನು ತಲುಪಿಸುತ್ತಿದ್ದೆ"

ಎಂದು ಇಬ್ಬರೂ ಮಲುಹಣನ ಮುಖದ ಬೆವರು ಕೀಳಿಸಿದರು. ಸ್ವಲ್ಪ ಬೇಸರವಾಗಲು ಜಯದೇವ್ ಮಂಚದ ಮೇಲುರುಳಿದ. ಪಕ್ಕದಲ್ಲಿದ್ದ ಆರಾಮ ಕುರ್ಚಿಯ ಮೇಲೆ ವಿಜಯ್ ಕುಳಿತು ತಲೆಹರಟೆಯನ್ನು ಮತ್ತೆ ಆರಂಭಿಸಿದರು. ಕೇಶವಭಟ್ಟರು ಇಣುಕಿ..

"ಸ್ವಾಮಿ... ಮಲುಹಣ ದೇವರೂ...ಹಾಲು ತರಲೋ....ಅಥವಾ ಹಣ್ಣಿನ ರಸ ತರಲೋ ?"

ಮಲುಹಣನು ಸ್ವಲ್ಪ ಚೇತರಿಸಿಕೊಂಡ ದನಿಯಲ್ಲಿ

"ಏನು ಬೇಕು ಹೇಳಿ ನಾಚಿಕೊಳ್ಳಬೇಡಿ."

"ಏನೂ ಬೇಡಪ್ಪಾ ಸದ್ಯ ಇದಾದ ಮೇಲೆ ಸ್ವಲ್ಪ ವಿಶ್ರಮಿಸಿಕೊಂಡ ಅದಕ್ಕಿಂತ ಬೇರೊಂದು ಬೇಕಿಲ್ಲ" ಎಂದ ವಿಜಯ್.

"ಸರಿ ಭಟ್ಟರೆ ಅಡಿಗೆಯನ್ನೇ ಬೇಗ ಮುಗಿಸಿ" ಎನ್ನಲು ಭಟ್ಟ ಕೋಣೆಯತ್ತ ನಡೆದರು.

ಜಯದೇವ್ ಮಂಚದ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದ ತಾಳೆಯ ಲೆಯತ್ತ ಕಣ್ಣಾಡಿತೊಡಗಿದ. ಅದನ್ನು ನೋಡಿದ ಮಲುಹಣ ಅದ ಮೇಲೆತ್ತಿಡುವ ಮನದಿಂದ ಎದ್ದ. ಅಷ್ಟು ಹೊತ್ತಿಗೆ ಆತ ಓದಿ,

"ಏನು ವಾತ್ಸಾಯನ ಕಾಮಸೂತ್ರವನ್ನು ಓದಲಿಕ್ಕೆ ಆರಂ ಮಾಡಿ ಬಿಟ್ಟಿದ್ದೀರಿ?"

ಕೂಡಲೇ ಜಯದೇವ್,

"ಹಾಗೇನು ? ಅದೂ ಸಾಹಿತ್ಯದ ಒಂದು ಭಾಗವಲ್ಲವೇ ? ಅದ ಅಭ್ಯಾಸ ಮಾಡುತ್ತಿದ್ದಾರೆ ಕಾಮಶಾಸ್ತ್ರ ಕಲಾ ಪಂಡಿತರಾಗಲು"

"ಪುಸ್ತಕದ ಬದನೇಕಾಯಾದರೇನು ? ಅನುಭವಿಸಿ ಪಡೆ ಬೇಡವೇ?"

"ಅದು ಒಂದು ದಿನವಾಗುತ್ತದೆ."

"ಮೊದಲು ನಂದಿಯೇ ಸಾವಿರ ಶ್ಲೋಕದಲ್ಲಿ ಬರೆದಿದ್ದಾನೆ, ಓದ ಅದಾದ ಮೇಲೆ ಅನೇಕರು ಬರೆದರು. ಮಲುಹಣರೂ ಒಂದು ಬರ ಪ್ರಪಂಚಕ್ಕೆ ಪ್ರಸಿದ್ಧಿ ಬರಲಿ"

"ಅದುದರಿಂದಲೇ ಬಂದರೂ ಬರಬಹುದು. ಖ್ಯಾತಿ ನೆಲೆಸಿದರ ನೆಲಸಬಹುದು..."

ಹೆಚ್ಚಿಗೆ ಮಾತು ಬೆಳೆಸುವುದರಲ್ಲಿ ಹುರುಳಿಲ್ಲ ಎಂದು ತಿಳಿದು..

"ಸಾಕು ಎಲ್ಲರೂ ಊಟಕ್ಕೆ ಸಿದ್ಧರಾಗಿ ಬರೇ ಆಡಿದ್ದೇ ಆಡ ಕಿಸಬಾಯಿದಾಸಯ್ಯ ಅಂತ ಇರಬೇಡಿ"

ಎಂದು ಆತನ ಕೈಯಿಂದ ಕಟ್ಟನ್ನು ಕಿತ್ತು ಕಟ್ಟಿಟ್ಟ ಮಲುಹಣ.

ವಿಜಯ್ ನಗುತ್ತಾ...

"ಇನ್ನು ರಾತ್ರಿಯೆಲ್ಲಾ ಆ ಮಲುಹಣೆಯೇ ಬಂದು ಕಾಮಶಾಸ್ತ್ರ ಕಲಿಸುವ ಗುರುವಾಗುತ್ತಾಳೆ."

"ಹೌದು...ಹೌದು..." ಎಂದು ಜಯದೇವ್ ಸ್ನಾನದ ಮನೆಗೆ ಕೈ ತೊಳೆಯಲು ಹೊರಟ

ಮಲುಹಣ-ವಿಜಯ್ ಇಬ್ಬರೂ ಆತನನ್ನು ಹಿಂಬಾಲಿಸಿದರು.

ಕೇಶವಭಟ್ಟರು ಸಿದ್ಧಪಡಿಸಿದ ಬಿಸಿ-ಬಿಸಿ ಘಮ ಘಮ ನಾಸಿಕ ರಂಧ್ರವನ್ನು ಹೊಕ್ಕು ನಾಲಿಗೆಯಿಂದ ನೀರು ಕೀಳಿಸಿತು. ಸುವರ್ಣಭಟ್ಟರು ಬರುತ್ತಾ...

"ಬನ್ನಿ ...ಕುಳಿತುಕೊಳ್ಳಿ. ಅಡಿಗೆಯೆಲ್ಲಾ ಅಣಿಯಾಗಿದೆ"

ಎನ್ನುವಷ್ಟರಲ್ಲೇ ಎಳೆಬಾಳೆ ಎಲೆಯನ್ನು ಹಾಸಿ, ನೀರನ್ನು ಇಟ್ಟು, ಭಕ್ಷ್ಯ ಭೋಜ್ಯಗಳನ್ನು ಬಡಿಸಿದರು. ಬಾಯಿ ಚಪ್ಪರಿಸುತ್ತಾ ಮೂವರು ಭಟ್ಟರನ್ನು ಹೊಗಳುತ್ತಾ ಊಟ ಮುಗಿಸಿದರು. ಸುವರ್ಣಭಟ್ಟರು ಊಟ ವಾದಮೇಲೆ...

"ನೀವೇನೂ ಮೂವರು ಬ್ರಹ್ಮಚಾರಿಗಳು ವೀಳ್ಯವನ್ನು ಸೇವಿಸುವ ಹಾಗಿಲ್ಲ. ನಾನೊಬ್ಬನೇ ತೆಗೆದುಕೊಳ್ಳುತ್ತೇನೆ. ನೀವು ಸಾಯಂಕಾಲದವರೆಗೆ ಇಲ್ಲೇ ಇದ್ದು ಹೋಗಿ."

"ಇಲ್ಲ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಹೋಗುತ್ತೇವೆ" ಎಂದು ಮಲುಹಣನ ಕೋಣೆಗೆ ತೆರಳಿದರು. ಸ್ವಲ್ಪ ಹೊತ್ತು ಕಾಡು ಹರಟೆ ಹೊಡೆದರು. ಅಷ್ಟರಲ್ಲೇ ಆಕಳಿಕೆ ನಿದ್ರೆಯ ನಾಂದಿ ಹಾಕಿತು.

"ನಿಮ್ಮ ತಂದೆಯವರಿಗೆ ಹೇಳಿಬಿಡು ಮಲುಹಣಾ ನಾವು ಬರುತ್ತೇವೆ' ಎಂದು ಕುದುರೆ ಹತ್ತಿ ಹೊರಟರು. ತಮ್ಮ ತಮ್ಮ ಮನೆಗಳ ಕಡೆಗೆ ಮಲುಹಣ ಅವರ ಹಾಸ್ಯದ ಮಾತುಗಳನ್ನು ನೆನೆಸಿಕೊಂಡ ನಗುತ್ತಾ ಬಂದು ಮಂಚದಲ್ಲಿ ಮಲಗಿದ. ಮತ್ತೆ ಅವರ ಸರಸ ಸಂಭಾಷಣೆ...ಚಿತ್ತ ನಾಟಕವಾಯಿತು.

ಪೌರ್ಣಿಮೆಯ ಚಂದಿರನು ಆಗಸದ ಮಂದಿರದಲ್ಲಿ ಮ್ಯೂ
ಮಂಜಿನ ಮಲೆಗಳನ್ನು ಬೆಳ್ಳಿಯ ಹಾಗೆ ಪರಿವರ್ತಿಸಿದ್ದನು. ಮಲುಹ
ಯನ್ನು ನೋಡಿದಂದಿನಿಂದ ಏನೋ ಒಂದು ರೀತಿಯ ಸಂತೋಷ. ಮನಸ್ಸಿ
ಆನಂದ. ಉಲ್ಲಾಸ. ಅದನ್ನು ಯಾರಿಗೂ ಹೇಳಲಾರದೆ ಬೆಟ್ಟದಷ್ಟು ಆಕಾಂ
ಆನಂದವನ್ನು ತನ್ನಲ್ಲೇ ಅದುಮಿಟ್ಟು ಕೊಂಡಿದ್ದ ಮಲುಹಣನಿಗೆ ಸ್ವ
ಊಟವೇ ಹೊಟ್ಟೆ ತುಂಬಿತು. ಮಿತ ನಿದ್ದೆಯೇ ಸಾಕಾಯಿತು. ಅಂದು ಊ
ಮಾಡಿ ತನ್ನ ಕೋಣೆಗೆ ಬಂದ.

ಹಾಲನ್ನು ಕುಡಿಯಲು ತೆಗೆದುಕೊಂಡ. ಅದರಲ್ಲೂ ಆಕೆಯ ಪ್ರ
ಬಿಂಬ. ಸ್ವಲ್ಪ ಹೊತ್ತು ಹಾಗೆಯೇ ನೋಡಿದ. ಮತ್ತೆ ಮರು ನಿಮಿಷದ
ಮಾಯವಾದಂತಾಗಲು ಹಾಲನ್ನು ಕುಡಿದು ಮಂಚದ ಮೆಲ್ಹಾಸಿಗೆಯ ಮೇ
ಉರುಳಿದ. ಕಾಮಶಾಸ್ತ್ರದ ಹೊತ್ತಿಗೆಯ ತಾಳೆಯೋಲೆಗಳನ್ನು ಬಿಚ್ಚಿ ಓದಲ
ವಾದ. ಏನೂ ಅರ್ಥವಾಗಲಿಲ್ಲ. ಓಲೆಗಳ ಅಕ್ಷರಗಳನ್ನು ಮುಚ್ಚಿ ತ
ರೂಪಿನೊಂದಿಗೆ ಕುಣಿದಾಡಿದಳು ಷೋಡಶಿ . ನಾನಾ ಭಂಗಿಗಳಲ್ಲಿ ಸುಳಿ
ಡಿದಳು, ಚಿತ್ತಿನಿ ಸ್ತ್ರೀಯಂತೆ, ಸ್ವಲ್ಪ ಸಮಯ ಹಸ್ತಿನಿ ಸ್ತ್ರೀಯಂತೆ. ಮ
ಕೆಲವು ಸಮಯದಲ್ಲಿ ಪದ್ಮಿನ ಸ್ತ್ರೀಯಂತೆ, ರೂಪನ್ನು ತೋರುತ್ತಾ ಮಯೂ
ತಿಯಂತೆ ಬಣ್ಣ ಬದಲಾಯಿಸಿ, ಆತನ ಚಿತ್ತದಲ್ಲಿ ನಾನಾ ಭಾವಭಂಗಿಗಳ
ನರ್ತಿಸಲಾರಂಭಿಸಿದಳು. ಓಲೆಗಳನ್ನು ಮುಚ್ಚಿ ಕಿಟಕಿಯತ್ತ ದೃಷ್ಟಿ ಹರಿಸಿದ
ಅದರಲ್ಲಿನ ಪರದೆಗಳು ಗಾಳಿಗೆ ನರ್ತಿಸಲಾರಂಭಿಸಿದವು. ಅದರ ಜತೆ ಮ
ಹಣಿಯೂ ರೂಪತಾಳಿ ನಿಂತಿದ್ದುದು ಅತನಿಗೆ ಮತ್ತಷ್ಟೂ ಹಿಂಸೆಯಾಯಿತು
ಹೊರಗಡೆ ಗಿಡಗಳತ್ತ ದೃಷ್ಟಿ ಹರಿಸಿದ, ಅವುಗಳ ಹೂವುಗಳಲ್ಲಿ ಆಕೆಯ
ನಕ್ಕು ಮಾತನಾಡಿಸುವಂತಾದಳು. ರತಿಯ ರೂಪು ಎಲ್ಲೇ ನಿಲ್ಲಲಿ, ಕೂರ
ನೋಡಲಿ, ಸರ್ವವೂ ಮಲುಹಣಿಮಯವಾಯಿತು. ಎಷ್ಟೇ ಮರೆತರೂ ಆ
ಮೋಹಿನಿಯಂತೆ ಬಂದು ಕಾಡಿದಳು. ನಾಲ್ಕಾರು ಸಾರಿ ಹೊರಳಾಡಿದ. ನಿ
ಹತ್ತಲೇ ಇಲ್ಲ. ಏನು ಮಾಡಬೇಕೆಂಬುದೇ ತಿಳಿಯದೇ ಆಕೆಯನ್ನು ಮತ್ತೆ
ನೋಡಬೇಕೆಂಬ ಹಂಬಲ ಹುಟ್ಟಿಸುವಂತಿತ್ತು. ಮೊದಲ ದಿನದ ನೋ

ಸಾಲದೆ, ಮತ್ತೆ ನೋಡಿ ತೃಪ್ತಿ ಪಡುವ ಬಯಕೆಯನ್ನು ಕಂಗಳು ಬೇಡಲಾರಂಭಿಸಿದವು. ಪಂಚೇಂದ್ರಿಯಗಳೂ ಬಯಕೆ ತಾಳಿದವು.

ಹಾಗೂ ಹೀಗೊ ಅರ್ಧರಾತ್ರಿ ಸಮಯವಾಯಿತು. ಸ್ವಲ್ಪ ಕಣ್ಣು ಮುಚ್ಚಿದ. ಮರುಕ್ಷಣದಲ್ಲೇ ಮಲುಹಣ ಕನಸಿನ ಲೋಕದಲ್ಲಿ ವಿಹರಿಸಲಾರಂಭಿಸಿದ. ಆ ಸುಂದರ ಕನಸು ಹಿಂದೆಂದೂ ಕಂಡಿರಲಿಲ್ಲ. ಆ ಸುಖವನ್ನು ಅನುಭವಿಸುತ್ತಿರಲಿಲ್ಲ. ಆದರೆ ಇಂದು ಇದ್ದಕ್ಕಿಂದ್ದಂತೆಯೇ ಕಾಣಿಸತೊಡಗಿತು.

ಅಪರಾಹ್ನದ ಸಮಯ ನೆತ್ತಿಯನ್ನು ಸುಡುವಷ್ಟು ಬಿಸಿಲು. ಮಲುಹಣೆಯನ್ನು ಮತ್ತೆ ನೋಡಬೇಕೆಂದು ಮನದಲ್ಲಿ ಹಿರಿಯಾಸೆ. ಹಿಂಸಿಸಲು ಆಕೆಯ ಮನೆಯತ್ತ ಕುದುರೆಯನ್ನೇರಿ ತನ್ನ ಕೆಳದಿಯಾರಾದ ಸ್ವರೂಪ್ ಸರೋಜ್ ಜೊತೆ ಹೊರಗಡೆ ಸವಾರಿ ಹೊರಟಿದ್ದಳು. ಮಲುಹಣನು ಆಕೆಯನ್ನು ಹಿಂಬಾಲಿಸುತ್ತಾ ಮೆಲ್ಲನೆ ಹೊರಟು ಝೀಲಂ ನದಿಯ ಹತ್ತಿರಕ್ಕೆ ಬಂದರು. ಬಿಸಿಲು ನೆತ್ತಿಯನ್ನೇರಿತು. ಮುಖ ಮೈ ಬೆವರಿನಿಂದ ತುಂಬಿತ್ತು. ಮೂವರು ಇಳಿದರು. ಮಲುಹಣನೂ ದೂರದಲ್ಲೇ ಇಳಿದು ಅಶ್ವವನ್ನು ಮರವೊಂದಕ್ಕೆ ಕಟ್ಟಿ ಹಾಕಿ ಮರೆಯಾಗಿ ನಿಂತ. ಜಲಕ್ರೀಡೆಗೆ ಬಂದಿದ್ದುದರಿಂದ ಅಷ್ಟೊಂದು ಅಲಂಕೃತಳಾಗಿರಲಿಲ್ಲ. ಸಾಮಾನ್ಯ ಉಡುಗೆಯೇ ಆಕೆಯ ಸೌಂದರ್ಯವನ್ನು ತುಂಬಿತ್ತು.. ಮೂವರೂ ಜಲಕ್ರೀಡೆಗೆ ಸಿದ್ಧರಾಗಲು ತಮ್ಮ ಮೇಲುಡುಗೆಯನ್ನೆಲ್ಲಾ ತೆಗೆದು ನದಿಯ ದಡದ ಮೇಲೆ ಎಸೆದರು. ಮಲುಹಣನು ಮಲುಹಣೆಯ ಅಂಗ ಸೌಷ್ಟವದತ್ತ ದೃಷ್ಟಿಸಿ ನಿಂತ..

ನೀಳ್ಗುಪ್ಪಸವನ್ನು ತೆಗೆದು ಎಸೆದಳು. ಬಿಗಿ ಪೈಜಾಮು ತೆಗೆಯಲು ಬಿಗಿ ಶರಾಯಿ, ಮೊಲೆಗಟ್ಟು ಮಾತ್ರ ದೇಹದ ಮೇಲೆ ಉಳಿದುವು. ಅಂದು ಅಂಗಸೌಷ್ಟವವನ್ನು ಬಟ್ಟೆ ಮುಚ್ಚಿದಾಗ ನೋಡಿದ್ದ. ಆದರೆ ಇಂದು ಬಿಹ್ಮೊಲೆಗಳು, ನುಡ್ಡೊಡೆಗಳು, ಸವಿದೋಳುಗಳು, ಆಳವಾದ ಹೊಕ್ಕಳು, ಮಾಟ ನಿತಂಬಗಳು, ಬಳುಕುವ ಕಟಿ, ಮೈ, ಮುಖಗಳು ರಂಜಿಸುತ್ತಿದ್ದುವು: ಮೂವರೂ ನೀರಿಗೆ ಇಳಿದರು. ಕೋಗಿಲೆಯ ಇಂಚರ ದಲ್ಲಿ ಹಾಡಿ ಈಜಾ

ಡಿದರು. ಇವನ್ನು ನೋಡಿದ ಮಲುಹಣ ಶ್ರೀಕೃಷ್ಣನು ಗೋಪಿಕಾ ಸ್ತ್ರೀಯರಿಗೆ ಮಾಡಿದ ಹಾಗೆ ಮಾಡಬೇಕು ಎಂದು ಯೋಚಿಸಿದ. ಆ ಕಡೆ ದಡದಲ್ಲಿ ಸ್ವರೂಪ್-ಸರೋಜ್ ಬಟ್ಟೆ ತೆಗೆದು ಹಾಕಿದ್ದ. ಅವರ ಬಟ್ಟೆಗಳಿಗೆ ಕೈ ಹಾಕದೆ ಮೆಲ್ಲನೆ ಬಂದು ಮಲುಹಣೆಯ ಬಟ್ಟೆಯನ್ನೇ ತೆಗೆದುಕೊಂಡ. ಜಲ ಕ್ರೀಡೆ ಯಾದ ಮೇಲೆ ಸ್ವರೂಪ್-ಸರೋಜ್ ತಮ್ಮ ತಮ್ಮ ಬಟ್ಟೆಗಳನ್ನು ಬಿಚ್ಚಿ ಮಡಿಯನ್ನು ಹಾಕಿಕೊಂಡರು. ಮಲುಹಣೆಯನ್ನು ಸಾಕು ಬಾ ಎಂದರೂ ಇನ್ನೂ ನೀರಲ್ಲಿ ಆಟವಾಡುತ್ತಾ ಕಾಲ ಕಳೆಯಲಾರಂಭಿಸಿದಳು. ಸ್ವಲ್ಪ ಹೊತ್ತಾದ ಮೇಲೆ ಸಾಕಾಗಿ ದಡದತ್ತ ಬಂದಳು. ದೇಹಕ್ಕೆ ಅಂಟಿದ್ದ ನೀರಿನ ಹನಿಗಳು ಕಪ್ಪೆಯ ಚಿಪ್ಪಿನ ಮೇಲೆ ಸ್ವಾತಿಯ ಮಳೆಬಿದ್ದು ಜಾತಿ ಮುತ್ತಾದಂತೆ ಅದರ ಮೇಲೆ ಸೂರ್ಯನ ಹೊಂಗಿರಣಗಳು ಬಿದ್ದು ಹೊಳೆಯಲಾರಂಭಿ ಸಿದವು. ಮಲುಹಣೆಯು ತನ್ನ ಅರಿವೆಗಳಿವೆಯೇ ಏನು ಎಂಬುದನ್ನೂ ಅರಿಯದೆ ತನ್ನ ಮೊಲೆಗಟ್ಟುಗಳನ್ನು ಬಿಚ್ಚಿಟ್ಟಳು. ಅದನ್ನು ನೋಡಿದ ಮಲು ಹಣನು ಉಗುಳು ನುಂಗಿ ಒಂದು ನಿಮಿಷ ಕಣ್ಮುಚ್ಚಿದ. ಕೂಡಲೇ ಒಳಗಿನ ತುಂಡು ಶರಾಯಿಯನ್ನು ತೆಗೆದು ಎಸೆದಳು. ಬಟ್ಟೆ ತೊಟ್ಟುಕೊಳ್ಳಲು ನೋಡುತ್ತಾಳೆ, ಅವಳಿಟ್ಟ ಅರಿವೆಗಳಿಲ್ಲದೆ ಅವಕ್ಕಾದಳು. ಕೂಡಲೇ ತನ್ನ ಮರ್ಮಸ್ಥಾನಗಳನ್ನು ಮುಚ್ಚಿಕೊಂಡು ಕುಳಿತಳು. ಮತ್ತೆ ಒದ್ದೆ ಬಟ್ಟೆಯನ್ನೇ ಕೊರೆದು ಹಿಂಡಿ ತೊಟ್ಟುಕೊಂಡಳು. ಮರದ ಹಿಂದೆ ಒಬ್ಬ ವ್ಯಕ್ತಿ ಇದ್ದುದನ್ನು ಕಂಡು ಕುಪಿತಳಾದಳು. ಕೂಡಲೇ ಅತ್ತ ಬಂದು ಆತನ ಕೈಯಲ್ಲಿದ್ದ ಬಟ್ಟೆ ಯನ್ನು ಕಸಿದುಕೊಳ್ಳಲು ಸಿದ್ಧಳಾದಳು. ಆ ಕೋಪದ ಮುಖವೂ ಮಲು ಹಣನಿಗೆ ಹಿಡಿಸಿತು. ಕೈಯಿಂದ ಸೆಳೆದುಕೊಳ್ಳಲು ಬರಲು ಕೈ ಹಿಡಿದುಕೊಂಡ. ಆ ನುಣ್ಣೈಗಳ ಸ್ಪರ್ಶದಿಂದ ಪುಳಕಿತನಾದ. ಭದ್ರವಾಗಿ ಒತ್ತಿ ಹಿಡಿದ. ಮಲುಹಣೆಗೆ ಮುಖವು ಕೆಂಪೇರಿತು. ಮೈಯಲ್ಲಿ ವಿದ್ಯುತ್ ಪ್ರವಾಹ ಹರಿ ಯಿತು. ಯಾವುದೋ ಲೋಕದಲ್ಲಿ ವಿಹರಿಸಿದಂತಾಯ್ತು.. ಆಕೆಗೂ ಆ ಸ್ಪರ್ಶ ಹಿತ ಕೊಡದೇ ಇಲ್ಲ. ಹಿಂದೆಂದೂ ಅನುಭವಿಸದ ಅನುಭವ ಇಬ್ಬರಿಗೂ ಆದಂತಾಯಿತು. ಆದರೂ ನಟಿಸುವ ದನಿಯಲ್ಲಿ ಮಲುಹಣೆ..

"ಪರಸ್ತ್ರೀಯನ್ನು ಹೀಗೆ ಹಿಡಿದುಕೊಳ್ಳುವುದು ಸರಿಯಲ್ಲ"

"ಅದೇನೋ ತಪ್ಪು. ಪರಪುರುಷರ ಕೈ ಹಿಡಿದುಕೊಳ್ಳಬಹುದೇ ?"

" ನನ್ನ ಬಟ್ಟೆ ನಿಮ್ಮ ಕೈಯಲ್ಲಿರುವಾಗ ಹಾಗೆ ಮಾಡಿದರೆ ಅದರಲ್ಲಿ ತಪ್ಪೇನು?"

"ಬಿದ್ದು ಹೋಗುತ್ತಿದ್ದ ನಿಮ್ಮನ್ನು ರಕ್ಷಿಸಲು ನಾನು ಕೈ ಹಿಡಿದು ಕೊಂಡುದುದು ತಪ್ಪೇ ? ಇಲ್ಲದೇ ಹೋಗಿದ್ದರೆ ಹಿಂದಕ್ಕೆ ಲಾಗ ಹೊಡೆಯ ಬೇಕಾಗಿತ್ತು..."

"ಸಾಕು ನಿಮ್ಮ ಪರಿಹಾಸ್ಯದ ಮಾತುಗಳು."

"ಹೆಚ್ಚಿಗೆ ಮಾತನಾಡಿದರೆ ಅಸಹ್ಯವಾದೀತು. ನ್ಯಾಯವಾಗಿ ಕೇಳಿ ತೆಗೆದುಕೊಳ್ಳಿ..."

"ಅನ್ಯಾಯವಾಗಿ ತೆಗೆದುಕೊಂಡಿರುವುದನ್ನು ನ್ಯಾಯವಾಗಿ ಹೇಗೆ ತೆಗೆದುಕೊಳ್ಳುವುದು ? ಕೃಷ್ಣನು ಗೋಪಿಕಾಸ್ತ್ರೀಯರ ಬಟ್ಟೆಗಳನ್ನು ಅಪ ಹರಿಸಿದಂತೆ ಅಪಹರಿಸಿದಿರಿ. ನಿಮಗೆ ನಾಚಿಕೆಯಾಗಲಿಲ್ಲವೇ ?"

"ಅಂಥ ಶ್ರೀಕೃಷ್ಣ ಪರಮಾತ್ಮನಿಗೇ ಆಗಲಿಲ್ಲ. ನಮ್ಮಂಥವರಿಗೆ ಆದರೇನು ?"

"ಗಂಡಸರೇ ಅಷ್ಟು ಬಲು ಭಂಡರು. ಡೊಂಬರವ ಬಿದ್ದರೂ ಒಂದು ಲಾಗ ಎನ್ನುವವನು"

ಮಲುಹಣೆಯು ಚಳಿಯ ಗಾಳಿಗೆ ಕಟಕಟನೆ ನಡುಗಿದಳು.

"ಹೆಂಗಸರ ಬುದ್ಧಿ ಬಲುಚೆಂದ. ಎಲ್ಲಾ ನಿಮ್ಮದು ಆಟ."

"ಹೋಗಲಿ ಬಟ್ಟೆಯನ್ನು ಕೊಡಿ ಚಳಿಯಾಗುತ್ತೆ"

"ಬೇಕಾದಲೆ ನನ್ನ ನಿಲುವಂಗಿಯನ್ನು ಕೊಡುತ್ತೇನೆ ತೆಗೆದುಕೊಳ್ಳಿ"

ಎಂದು ಆಕೆಯ ಬಟ್ಟೆಯನ್ನೆಲ್ಲಾ ಕೊಟ್ಟ. ನಾಚಿ ಕೆಂಪಾದ ಆಕೆ...

"ಸ್ವಲ್ಪ ಮರೆಯಾಗುತ್ತೀರಾ ? ನಾನು ತೇವದ ಬಟ್ಟೆ ತೆಗೆದು ಈ ಬಟ್ಟೆ ಹಾಕಿಕೊಳ್ಳೇಕು"

ಇಷ್ಟನ್ನೆಲ್ಲಾ ನೋಡುತ್ತಿದ್ದ ಕೆಳದಿಯರು ಕಿಲು ಕಿಲನೆ ನಗುತ್ತಾ ಬಂದರು. ಮಲುಹಣನಿಗೆ ಇದರಿಂದ ಮತ್ತಷ್ಟು ನಾಚಿಕೆ ಆಯಿತು.

" ಇನ್ನೇನು ಮೊದಲನೇ ಸಾರಿಯೇ ಆಯಿತಲ್ಲಾ ನಿನ್ನಂಗ ಪ್ರದರ್ಶನ "

"ಸಾಕು ಹೋಗ್ರೇ ನೀವು" ಸಿಡುಕಿನ ದನಿ ಬೆರೆಸಿದಳು. ಇಬ್ಬ ಕೂಡಲೇ ಹಿಂದೆ ಸರಿದರು. ಬಟ್ಟೆಯನ್ನೆಲ್ಲಾ ಉಟ್ಟುಕೊಂಡಮೇಲೆ ಮ ಹಣ ಬಂದು ನುಣ್ಣನಿಯಲ್ಲಿ...

"ರತಿಯ ಸಿಂಗಾರವಾಯಿತೇ ?" ಎಂದ.

"ನಾನು ರತಿಯಾದರೆ ನೀವು ಮನ್ಮಥರೇನು ?"

"ಹೌದು ಅದರಲ್ಲಿ ಸಂಶಯವೇ ಇಲ್ಲ"

"ಮನ್ಮಥನಿಗೇ...."

"ಅತನೇ ಸಿಂಗಾರದ ತದ್ರೂಪವಾಗಿರುವಾಗ ಅತನಿಗ ಸಿಂಗಾರ?"

"ಹಾಗಾದರೆ ತಮ್ಮ ಪರಿಚಯ ?"

"ನಾನು ಮನ್ಮಥ..."

"ಭೂ ಲೋಕದ ಮನ್ಮಥನೋ ದೇವ ಲೋಕದ ಮನ್ಮಥನೋ ಮುಗುಳ್ನಗು ತುಂಬಿ ಉಲಿದಳು.

"ಅವರವರ ಭಾವಕ್ಕೆ ಹೇಗೆ ತೋರುವುದೋ ಆ ಮನ್ಮಥ"

"ನೀನು.....?"

"ನಾನು ರತಿ. ನನ್ನ ಪರಿಚಯವೂ ನಿಮ್ಮಂತೆ "

"ಬಲು ಜಾಣೆ ನೀನು"

"ನೀವು ಪೆದ್ದರ ?"

"ಜಾಣೆಯ ಕೈ ಹಿಡಿಯುವವ ಹೇಗಿರಬೇಕು ?"

"ಜಾಣನಾಗಿಯೇ ಇರಬೇಕು"

"ಸರಿ ಹಾಗಾದರೆ ಮತ್ತೇನು ಹೇಳಲಿ ? ಹೇಳುವ ವಿಷಯ ಬೇಕಾದ ಷ್ಟಿವೆ ಹೇಗೆ ಹೇಳಲಿ ? ಎಷ್ಟು ಹೇಳಲಿ ?..ನನ್ನ ಮನಸ್ಸು ಸುರಿಯಲು ತುಟಿದುಕೊಳ್ಳುತ್ತಿದೆ"

"ಬನ್ನಿ ಆ ಮರದ ಹತ್ತಿರದ ಹುಲ್ಲಿನ ಮೇಲೆ ಕುಳಿತು ಹೇಳುವಿರಂತೆ ಪುರಾಣವನ್ನೇ ಬೇಕಾದರು. ನಿಂತು ನಿಮಗೂ ಸಾಕಾಗುತ್ತದ. ನನಗೂ ಸಾಕಾಗುತ್ತದೆ. ಹೋಗೋಣ"

ಇಬ್ಬರೂ ಮೆಲ್ಲನೆ ಹೆಜ್ಜೆ ಇಡುತ್ತಾ ಹೋಗಿ ಹಸಿರು ಹುಲ್ಲಿನ ಮೇಲೆ ಕುಳಿತರು.

ಮಲುಹಣ ಆಕೆಯನ್ನು ದಿಟ್ಟಿಸಿ ನೋಡಿ..

"ಮಲುಹಣಿ ಅಂದು ನಿನ್ನನ್ನು ಸಿಂಗಾರದಲ್ಲಿ ನೋಡಿದ್ದೆ. ಇಂದು ಹಾಗೆಯೇ ನೋಡುತ್ತಿದ್ದೇನೆ. ಆದರೂ ನಿನ್ನ ಸೌಂದರ್ಯ ರಾಶಿ ಹಾಗೆಯೇ ಇದೆ. ಅಂದು ನೋಟದಲ್ಲಿ ತಿವಿದು, ಇಂದು ಸ್ವಪ್ನದಲ್ಲಿ ಕೊಲ್ಲುತ್ತಿದ್ದೀಯೆ. ನಮ್ಮಿಬ್ಬರ ಸಮಾಗಮ ಆದಷ್ಟು ಬೇಗ ಆದರೆ ಒಳ್ಳೆಯದಲ್ಲವೇ?"

" ಒಳ್ಳೆಯದೇನೋ ಸರಿ. ನೀವು ಒಳ್ಳೆಯ ಕುಲದವರು. ನಾನು ಹೀನ ಕುಲದವಳು. 'ವೇಶ್ಯೆ' ಧ್ವನಿಯು ದುಗುಡ ದುಮ್ಮಾನದಿಂದ ತುಂಬಿತ್ತು.

"ಹೌದು ಅದು ನನಗೂ ಗೊತ್ತು."

ದೂರದ ಕೆಸರಿನಲ್ಲಿ ತಾವರೆಯ ಗಿಡಗಳು ಹೂ ಬಿಟ್ಟಿದ್ದವು. ಅದನ್ನು ನೋಡಿದ ಮಲುಹಣನು ಬೆರಳು ತೋರಿಸಿ...

"ಅದೇನು ?"ಎಂದ.

"ಅದು ತಾವರೆ"ಮಾರುತ್ತರವಿತ್ತಳು ಮಲುಹಣಿ.

"ಅದು ಎಂಥ ಸ್ಥಳದಲ್ಲಿ ಬೆಳೆದಿದೆ ?"

"ಕೆಸರಲ್ಲಿ"

"ಅದನ್ನು ಬೆಳೆದುದನ್ನು ದೇವರಿಗೆ ಅರ್ಪಿಸುವುದಿಲ್ಲವೇ ?"

"ಹೌದು..."

"ಹಾಗೆಯೇ ಹೀನಕುಲವೆಂಬ ಕೆಸರಿನಲ್ಲಿ ನೀನು ಕಮಲವೇಕಾ
ಬಾರದು ?"

ಆಗಬಹುದು ಎಂದು ಮೆಲ್ಲನಿಗೂಡಿಸುವ ಸಂತಸ, ಸಮಾಧಾನಗ
ತುಂಬಿದ್ದುವು.

"ಹಾಗಾದರೆ ನನ್ನಲ್ಲಿ ನಿಮ್ಮ ಪೂರ್ಣ ನಂಬಿಕೆ ಇದೆಯೇ ?"

"ಇಲ್ಲದೆ ನಿನ್ನನ್ನು ಕೇಳುತ್ತಿದ್ದೇನೆಯೇ "

"ನನ್ನ ಸೌಂದರ್ಯಕ್ಕೆ ಮಾರುಹೋಗಿ ಆಮೇಲೆ ಕೈ ಬಿಡುವಿರಾ ?"

"ಖಂಡಿತ ಈ ಜನ್ಮದಲ್ಲಿ ಸಾಧ್ಯವಿಲ್ಲ. ನಮ್ಮಿಬ್ಬರ ಸಂಬಂಧ
ಜನ್ಮಜನ್ಮಾಂತರದ್ದು. ಅದರ ತಂತು ಕಡಿಯಲು ಯಾರಿಂದಲೂ ಸಾಧ್ಯವಿಲ್ಲ
ಮುರಿದರೂ ಅದನ್ನು ಸರಿಪಡಿಸುತ್ತೇನೆ. ನೀನು ಕೈ ಬಿಟ್ಟರೂ ನಾನು ಕ
ಬಿಡುವವನಲ್ಲ"

"ಇದು ಖಂಡಿತವೇ ?"

"ಖಂಡಿತ ವಿಜಯೇಶ್ವರನಾಣೆ" ಎಂದು ಕೈ ಮೇಲೆ ಕೈಯಿಟ್ಟ
ಆಣೆಯಿಟ್ಟ.

ಇಬ್ಬರೂ ಕಿಲಕಿಲನೆ ನಕ್ಕರು. ದೂರದಲ್ಲಿದ್ದ ಕೆಳದಿಯರು ನಗುತ್ತಾ
ಓಡಿ ಬಂದು ತಮ್ಮ ನಗುವನ್ನು ಬೆರೆಸಿದರು. ಭದ್ರವಾಗಿ ಮಲುಹಣನು ಕ
ಹಿಡಿದುಕೊಂಡಿರಲು ಮಲುಹಣೆ..

"ನನ್ನ ಕೈ ಬಿಡಿ ಸಾಕು..." ಎಂದರೂ ಹಿಡಿದು ಬರಸೆಳೆದುಕೊಂಡ
ಹೊರಟು...ಬಲವಾಗಿ ಎಳೆಯಲು..

'ಹಾಯ್' ಎಂದಳು . ಕಣ್ಬಿಟ್ಟ ಮಲುಹಣ.

"ಎಲ್ಲಾ ಭ್ರಾಂತಿ. ಕನಸು"ಎಂದು ಮುಗುಳ್ನಗುತ್ತಾ ಮತ್ತೆ ಆ
ಕನಸಿನ ಕಲ್ಪನೆಯನ್ನು ಮಾಡಕೊಳ್ಳಲಾರಂಭಿಸಿದ.

ವಸಂತಮಾಸದ ಸಾಯಂಕಾಲ ಲತಾ ಮಂಟಪದ ಕೆಳಗೆ ಕುಳಿತಿದ್ದಾಳೆ. ಮನೆಯ ಮುಂದಿನ ತೋಟವು ನಾನಾ ಫಲ-ಪುಷ್ಪಗಳಿಂದ ತುಂಬಿ ಕಣ್ಣಿಗೆ ಹಬ್ಬವನ್ನೀಯುವಂತಿತ್ತು. ಲತಾ ಮಂಟಪದ ಕೆಳಗಿನ ಹಾಸುಗಲ್ಲಿನಲ್ಲಿ ಕುಳಿತು ತೂಗು ಹಾಕಿದ್ದ ಪಂಜರದಲ್ಲಿದ್ದ ಗಿಳಿಯೊಡನೆ ಸರಸವಾಡುತ್ತಿದ್ದಳು. ಅಲ್ಲಿಗೆ ಸರೋಜ್ ಹಿಂದುಗಡೆಯಿಂದ ಬಂದು ಆಕೆಯ ಕಣ್ಣುಗಳನ್ನು ಮುಚ್ಚಿದಳು. ಮೈ ಮುಟ್ಟಿ ನೋಡಿ ಅರ್ಥ ಮಾಡಿಕೊಂಡ ಮಲುಹಣೆ.

"ಸರೋಜ್..ಸರೋಜ್..ಬಿಡು"

"ಅಲ್ಲ...."

"ಸ್ವರೂಪ್.....ಸ್ವರೂಪ್"

"ಅಲ್ಲ ಅಲ್ಲ ಎಂದು ನಗುತ್ತಿರಲು ಜೋರಾಗಿ ಸೆಳೆದು ಕೈ ಬಿಡಿಸಿಕೊಂಡಳು. ಸರೋಜ್‌ಳನ್ನು ಬಿಗಿಯಾಗಿ ಅಪ್ಪಿಕೊಂಡಳು ಮಲುಹಣೆ. ಸರೋಜಾ ಬಿಡಿಸಿಕೊಳ್ಳುತ್ತಾ...

"ಮಲುಹಣೆ , ಬಿಗಿದಪ್ಪಿಕೊಳ್ಳುವುದು ನನ್ನನ್ನಲ್ಲ, ಗಂಡಸರನ್ನು"

"ಏನೇ ತುಂಟಿ..?"

"ಈಗ ತುಂಟತನ ನಡೆಸಿದೆಯಲ್ಲಾ..ಅದಕ್ಕೆ"

"ಒಳ್ಳೆ ಪ್ರಚಂಡಿ ಕಣೆ, ಎಲ್ಲಿ ಆಕೆ ಬರಲೇ ಇಲ್ಲ, ಸ್ವರೂಪ್ ಕಣೆ'

ಎನ್ನುವಷ್ಟರಲ್ಲಿ ಸ್ವರೂಪ್ ಗಿಡದಲ್ಲಿನ ಒಂದೂ ಹೂವನ್ನು ಕೊಂಬೆ ಸಹಿತ ಕಿತ್ತು ತಿರುಗಿಸುತ್ತಾ ಬಂದು.

"ಏನು ಮಲುಹಣೆಯವರು ನನಗೆ ಕೀರ್ತಿ ತಂದಿದ್ದೀರಿ"

"ನಿನಗೆ ನೂರು ವರ್ಷ ಆಯಸ್ಸು ಕಣೇ. ಈಗ ತಾನೇ ನಿನ್ನ ಮಾತಾಡ್ತಾ ಇದ್ದೆ"

"ಅದನ್ನು ಕೇಳಿಯೇ ನಾನು ಹೇಳಿದುದು."

"ಅದಕ್ಕೆ ದೊಡ್ಡವರು ಹೇಳುತ್ತಾರಲ್ಲೆ, ಪ್ರಾಯಕ್ಕೆ ಬಂತೋ ಪ್ರಾಣಕ್ಕೆ ಬಂತೋ ಅಂತ" ಎಂದಳು ಸ್ವರೂಪ್.

"ಇನ್ನೇನು ಹತ್ತಿರ ಸಮೀಪಿಸಿದೆ" ಅವಳಿಗೆ ಪಿಸುದನಿಯೇ
ರಿದಳು ಸರೋಜ್. ಇಬ್ಬರೂ ಕಿಸಕಿಸನೆ ನಕ್ಕರು. ಅದನ್ನು ನೋಡಿ
ಮಲುಹಣೆ,

'ಏಕೆ ಜೋರಾಗಿ ಮಾತಾಡಬಾರದೇ ? ನೀವು-ನೀವೇ ಗುಸು ಗು
ಪಿಸ ಪಿಸ ಏಕ ಮಾತಾಡ್ತೀರಿ?"

"ಎಲ್ಲಾ ಆದಮೇಲೆ ನಿನಗೇ ಗೊತ್ತಾಗುತ್ತೆ. ಅಷ್ಟರತನಕ
ಆತುರ ಬೇಳ್ತೀಯೆ ?" ಎಂದು ಸ್ವರೂಪ್ ಮಾತನ್ನು ಮುಗಿಸುತ್ತಿದ್ದಂತೆಯ

"ಮಲುಹಣೀ....ಮಲುಹಣೀ...." ಎಂಬ ಬಿರುದನಿಯು ಮ
ರನ್ನೂ ಎಚ್ಚರಿಸಿ ಓಡಿಸಿತು. ಮಲುಹಣೆ ತಾಯಿಯ ಧ್ವನಿಯನ್ನು ತಿಳಿದು

"ಬಂದೇ ಅಮ್ಮಾ...ಬಂದೇ" ಎಂದು ನೀಳ ನಡಿಗೆಯಲ್ಲಿ ಹೋ
ಟಳು.

"ಇಷ್ಟೊತ್ತಾ ಕೂಸು ಬರೋದು ?"

"ಸುಮ್ಮನೆ ಏಕೆ ಒಂದೇ ಸಮನೇ ಕೂಗ್ತೀಯಮ್ಮಾ, ಒಂದು ಘಳಿ
ಹೊರಗಡೆ ಇದ್ರೂ ಆಗೋಲ್ವೇ ?"

"ಇದೇನವ್ವಾ ನೀನು ? ಮುಚ್ಚಂಜೆ ಹೊತ್ತು ಹೊರಗಡೆ...ಹಾಗೆ
ಇರಬಾರದು....ಗಾಳಿ ಗರ."

ಎಂದು ಇನ್ನೂ ಮಾತನ್ನು ಆಡುವುದರಲ್ಲಿದ್ದಳು ಪದ್ಮಾವ
ಕೂಡಲೇ "ಸಾಕು ಸುಮ್ನಿರಮ್ಮಾ ನಿನ್ದೆಲ್ಲಾ ಬರೇ ಹುಚ್ಚು" ಎಂದ
ಮಲುಹಣೆ.

"ಅಯ್ಯೋ...ಅಯ್ಯೋ...ಇಲ್ನೇ ನಿಂತ್ಕೋ ಕೂಸು, ನಿನಗೆ ಎಷ್ಟ
ಕಣ್ಮೇಸರಾಗಿದ್ದೀತು....ಒಂದು ಸ್ವಲ್ಪ ಆರತಿ ಮಾಡಿ ತರ್ತೀನಿ"

ಎಂದು ಒಳಗಡೆ ಹೋಗಿ ಅರಿಸಿನ ಕುಂಕುಮ ಸುಣ್ಣ ಹಾಕಿ ಕ
ಆರತಿ ನೀರನ್ನು ಮಾಡಿ ಎರಡು ಅಂಚಿಕಡ್ಡಿಯನ್ನು ತಂದಳು. ಅಷ್ಟು ಹೊತ್ತಿ
ಮಲುಹಣೆ ತಾಯಿಯ ಮಾತನ್ನು ಗಮನಿಸದೆ ಹಜಾರದಲ್ಲಿ ಬಂದು
ತಿದ್ದಳು. ಅದನ್ನು ನೋಡಿದ ತಾಯಿ..

"ಏನೇ...ಅಷ್ಟೊಂದು ಆತ್ರ, ಬರೋವರೆಗೆ ಒಳಗಡೆಗೇ ಬಂದು ಬಿಟ್ಟೆಯಲ್ಲಾ?"

"ಅವೆಲ್ಲಾ ಹಳೇಕಾಲದ ಗೊಡ್ಡು ಪುರಾಣ ಕಣ್ ಬಿಡಮ್ಮಾ"

"ಅವನ್ನೆಲ್ಲಾ ಸುಮ್ನೇ ಮಾಡಿಲ್ಲಾ ಒಳ್ಳೇದಕ್ಕೇ ಕಣೆ.." ಎಂದು ಆರತಿ ಎತ್ತಿ ಎಡಗೈಯ ಬೆರಳಿಂದ ಅವರ ಒಂದು ತೊಟ್ಟನ್ನು ಹಣೆಗಿಟ್ಟು ಅಂಚಿಕಡ್ಡಿಯನ್ನು ಉರಿಸಿ ಮುಖದಿಂದ ಇಳಿ ತೆಗೆದು ಹಜಾರದ ಮೂಲೆಗೆ ಇಟ್ಟಳು. ನಟ್ಟಿ ತೆಗೆದಳು. ತನ್ನ ಹಣೆಯ ಮೇಲೆ

"ಸರಿ ಈಗ ಸಮಾಧಾನವಾಯ್ತೇ ?" ದನಿಗೂಡಿಸಿದಳು ಮಗಳು ಮಲುಹಣೆ.

ದೂರದಲ್ಲಿ ಚಟಪಟನೆ ಉರಿಯುತ್ತಾ ಶಬ್ದ ಮಾಡುತ್ತಿದ್ದ ಅಂಚಿ ಕಡ್ಡಿಯತ್ತ ಮುಖ ಮಾಡಿ..

"ನೋಡೇ...ನೋಡೆ...ಹ್ಯಾಗೆ ಚಟ್‌ಪಟ್...ಚಟ್‌ಪಟ್ ಅಂತಾ ಇದೆ. ಯಾರ್‍ಯಾರ ಕಣ್ಣಾಗಿತ್ತೋ ಅವರ ಕಣ್ಣು ಸಿಡ್ಯಾ"

ಮತ್ತೆ ಮುಖದಿಂದ ಕೈ ಇಳಿ ತೆಗೆದು ತನ್ನ ಹಣೆಯ ಮೇಲೆ ಮತ್ತೆ ನಟ್ಗೆ ತೆಗೆದಳು. ಅಷ್ಟು ಹೊತ್ತಿನಿಂದ ಎಲ್ಲವನ್ನು ಗಮನಿಸಿ ಸ್ನೇಹಿತೆಯರು ನಕ್ಕರು.

"ನಮ್ಮ ಕಣ್ಣೇ ತಾಗಿತ್ತು..." ಅಂದಳು ಸರೋಜ್.

"ಸಾಕು ಸುಮ್ನಿರ್ರೇ...." ಎನ್ನಲು ಮಾತಿಲ್ಲದ ಬೊಂಬೆಯಾದರು.

ಮಲುಹಣೆ ತನ್ನ ಕೋಣೆಯ ಕಡೆಗೆ ಹೋಗಲು ಅಣಿಯಾದಳು. ಅವರಿಬ್ಬರೂ ಆಕೆಯನ್ನೇ ಹಿಂಬಾಲಿಸಿದರು. ಮಗಳನ್ನು ನೋಡಿದ ಪದ್ಮಾವತಿ ಮನದಲ್ಲೇ ಹಿರಿ ಹಿಗ್ಗಿದಳು.



ಮಲುಹಣೆಯ ಕೋಣೆಯಲ್ಲಿ ಚಿಮಣಿ ಎಣ್ಣೆಯ ದೀಪವು ಪ್ರ
ಮಾನವಾಗಿ ಉರಿಯುತ್ತಿತ್ತು. ಶಿವ ಪುರಾಣದಲ್ಲಿನ ಗಿರಿಜಾ - ಶಂ
ಕಲ್ಯಾಣದ ಕಥಾ ಭಾಗವನ್ನು ಮಲುಹಣೆ ಓದುತ್ತಿದ್ದಾಳೆ. ಗಿರಿಜ
ಶಿವನನ್ನು ಬಿಟ್ಟು ಬೇರೆ ಗಂಡನನ್ನು ನಾನು ವರಿಸುವುದಿಲ್ಲ ಎಬುದು ಆ
ಛಲ. ಅದನ್ನು ಸಫಲ ಮಾಡಿಕೊಂಡು ಶಿವನೊಡನೆ ವಿವಾಹವಾಗುವುದ
ಓದಿ ಬಹಳ ಸಂತೋಷವಾಯಿತು. ಅಷ್ಟನ್ನು ಸಾಧಿಸಲು ಅನೇಕ
ಆತಂಕಗಳು ಬಂದವು. ಅವನ್ನೆಲ್ಲಾ ಎದುರಿಸಿದುದರಿಂದಲೇ ಗಿರಿಜ
ಛಲವನ್ನು ಸಾಧಿಸಿದಳು. ಮನಸ್ಸು ಮಾಡಿದರೆ ಯಾವ ಕೆಲಸವನ್ನಾದ
ಮಾಡಬಹುದು ಎನ್ನಿಸಿತು. ಮತ್ತೆ ಕಣ್ಮುಂದೆ ಮಲುಹಣನ ದಿವ್ಯ ರ
ಸುಳಿಯಿತು. ' ನಾನು ಛಲ ಮಾಡಿದರೆ ಏಕೆ ಆತನನ್ನು ನನ್ನವನ
ಮಾಡಿಕೊಳ್ಳಬಾರದು ? ಎಂದು ಯೋಚಿಸಿದಳು. ಕತೆಯು ಮ
ಯುತ್ತಿದ್ದಂತೆ ಮುಂದಿನ ಭಾಗವನ್ನು ಓದಲು ಇಷ್ಟಪಡಲಿಲ್ಲ. ಹೊ
ಪ್ರಕೃತಿಯಲ್ಲಿ ಗಿಡ-ಮರಗಳು ನರ್ತಿಸುತ್ತಿದ್ದವು. ಮಧ್ಯ ರಾತ್ರಿಯ
ಆಗಾಗಲೇ ಮಂಜು ಸ್ವಲ್ಪ ಸ್ವಲ್ಪವಾಗಿ ಬೀಳುತ್ತಿತ್ತು. ಕಿಟಕಿಯ ಬಾಗಿ
ಭದ್ರಿಸಿ ದೀಪವನ್ನು ಸಣ್ಣಗೆ ಮಾಡಿ ಕುಳಿತಳು. ಆಗಸದಲ್ಲಿ ಮಬ್ಬು
ಯುತ್ತಾ ಕೋಣೆಯನ್ನು ಕತ್ತಲು ಆವರಿಸಿತು. ಆಕೆಯ ಕಣ್ಮ
ಇದ್ದಕ್ಕಿದ್ದಂತೆ ಒಂದು ಚಿತ್ರ ಸುಳಿಯಿತು.

ಮೆಲುಹಣೆ ಮೆಲ್ಲ-ಮೆಲ್ಲನೆ ಅಡಿಯಿಡುತ್ತಾ ಮಲುಹಣನ ಮ
ಬಂದಳು. ಮೆಲ್ಲನೆ ಕೈ ಬೆರಳುಗಳಿಂದ ಬಾಗಿಲನ್ನು ಕುಟ್ಟಿದಳು. ಮಲುಹ
ಆಗತಾನೇ ನಿದ್ರೆ ಹೋಗಿದ್ದನು. ಸ್ವಲ್ಪ ಜೋರಾಗಿ ತಟ್ಟಿದಳು. ಮನ
ಅಳುಕಿತ್ತು. ಮೈ ಮುಖದಲ್ಲಿ ಬೆವರು ಸಾಲುಗಟ್ಟಿದವು. ಶಬ್ದದಿಂದ ಎ
ಮಲುಹಣ ದೀಪದ ಬತ್ತಿಯನ್ನು ಮೇಲೆತ್ತಿದ. ಹೊರಗೆ ಬಾಗಿಲು
ವೆಂದೇ ಖಚಿತವಾಯಿತು.

" ಈ ಅರ್ಧ ರಾತ್ರಿಯಲ್ಲಿ ಬಾಗಿಲು ತಟ್ಟಿದವರಾರು ?" ಎ
ಮೆಲ್ಲನೆ ಕಿಟಕಿ ಹತ್ತಿರ ಬಂದು ತೆಗೆಯಲು ಕೈ ಬರಲಿಲ್ಲ. ಎಡವಿತು. ಅದ

ಧೈರ್ಯ ಮಾಡಿ ಕಿಟಕಿ ಬಾಗಿಲು ತೆಗೆದ. ಹೊರಗೆ ಸುಂದರಿಯೊಬ್ಬಳು, ಆಕೆ ಮೋಹಿನಿಯೇ ಇರಬಹುದೋ ಏನೋ ಎನ್ನಿಸಿ ಮತ್ತಷ್ಟು ಬೆವೆತು, ಕಿಟಕಿಯ ಹತ್ತಿರವೇ ಶಾಲನ್ನು ಹೊದ್ದು ಮುಖದ ಬೆವರನ್ನು ಒರೆಸಿಕೊಂಡು ತಲೆ ಬಗ್ಗಿಸಿ ನಿಂತ, ಅದನ್ನು ನೋಡಿ ಹತ್ತರ ಬಂದ ಮಲುಹಣೆ..

"ಬಾಗಿಲನ್ನು ತೆರೆಯಿರಿ...ನಾನು' ಎಂದಳು.

"ನಾನು ಎಂದರೆ ?"

"ನಾನು...ಮಲುಹಣೆ...."

ಮತ್ತೆ ದೃಷ್ಟಿಸಿ ನೋಡಿದ, ಆಕೆಯ ರೂಪು ಮಲುಹಣೆಯ ರೂಪನ್ನು ಹೋಲುವುದರಲ್ಲಿ ಆಶ್ಚರ್ಯವೇನಿಲ್ಲ. ಆಗ ಆತನ ಮನಸ್ಸು ಸ್ವಲ್ಪ ಧೈರ್ಯ ತಾಳಿತು. ಹೊರಗಡೆ ಮಂಜು ಜೋರಾಗಿ ಬೀಳಲಾರಂಭಿಸಿತು. ಅದನ್ನು ಸಹಿಸಲಾರದ ಹೆಣ್ಣು...

" ಹೊರಗಡೆ ಬಹಳ ಚಳಿಯಾಗುತ್ತಿದೆ. ಬಾಗಿಲು ತೆಗೆಯಿರಿ"

ಆ ಹೆಣ್ಣು ಹಲ್ಲನ್ನು ಕಟಕಟನೆ ಒದರುತ್ತಿದ್ದುದನ್ನು ನೋಡಿ ಕರುಣೆ ತುಂಬಿ ಬಂತು. ಬಾಗಿಲನ್ನು ತೆಗೆಯುವ ಮನಸ್ಸಾಯಿತು. ಆದರೂ ತಂದೆಯೋ, ಕೇಶವ ಭಟ್ಟರೋ ನೋಡಿಬಿಟ್ಟಾರು ಎಂಬ ಅಳುಕೂ ಜತೆ ಯಲ್ಲಿತ್ತು. ಅದರ ಜೊತೆಗೆ ಆಕೆಯನ್ನು ಹತ್ತಿರ ನೋಡುವ ಆಸೆಯೂ ಮನದಲ್ಲಿ ನಾಟಿತು. ಆದರೂ ಅರಸಿ ಬಂದ ಹೆಣ್ಣನ್ನು ಬಿಡುವವರಾರು ? ಏಕೆ ಆಕೆಯನ್ನು ಭೋಗಿಸಬಾರದು ಎನ್ನಿಸಿತು ಆತನ ಚಂಚಲ ಮನಸ್ಸು. ದೃಢ ಮಾಡಿಕೊಂಡು ಬಾಗಿಲು ತೆಗೆದನು. ಆಕೆ ಲಜ್ಜೆಯಿಂದ ಅಡಿಯಿಟ್ಟಳು.

" ಈ ಅರ್ಧ ರಾತ್ರಿಯಲ್ಲಿ ಬಂದುದಾದರೂ ಏಕೆ ?"

"ಹಗಲಿರುಳು ನಿಮ್ಮ ಚಿಂತೆಯಲ್ಲಿರುವ ನನಗೆ ನಿಮ್ಮಂಗ ಸಂಗ ಬಯಸಿದುದರಲ್ಲಿ ತಪ್ಪೇನು ? ಅದು ಪ್ರಕೃತಿ ನಿಯಮದ ಆಕರ್ಷಣೆ"

"ಅದೀಗ ಅಪಕರ್ಷಣೆಯಾದರೆ ?"

"ಏಕೆ...?"

"ಮಲುಹಣೇ ನೀನು ವೇಶ್ಯೆ...ನಾನು ಶೈವ ಕುಲಜ, ನಮ್ಮಿಬ್ಬರ ಸಮಾಗಮ ಸಾಧ್ಯವಾಗುವುದೇ ?"

"ಏಕಾಗಬಾರದು ? ಮನುಷ್ಯರು ಅಂದಮೇಲೆ ಎಲ್ಲರೂ ಒಂದೇ ಅಲ್ಲವೇ ?"

"ಎಲ್ಲರನ್ನೂ ಒಂದೇ ಎಂದರೂ ನಿಮ್ಮನ್ನು ಒಂದೇ ಎನ್ನಲಾಗದು"

"ಏಕೆ..."

"ನೀವು ವೇಶ್ಯೆಯರು, ಇಂದೊಬ್ಬ, ನಾಳೆಯೊಬ್ಬನು ಎಂದು ಭೋಗಕ್ಕೆ ಬಯಸುವವರು, ಹಣಕ್ಕೆ ಆಶಿಸುವವರು."

"ಹಾಗೆ ನಾನು ಮಾಡುವವಳಲ್ಲ, ನೀವು ನನ್ನನ್ನು ನಂಬಿ. ಗಿರಿಜೆ ಈಶನ ಕೈ ಹಿಡಿದಂತೆ ನಾನು ನಿಮ್ಮ ಕೈ ಹಿಡಿದು ಬಾಳುವೆನೆಂಬ ಹಿರಿಯಾಸೆ ಇಟ್ಟುಕೊಂಡಿರುವೆ, ಈ ಮನದ ಆಸೆಯನ್ನು ನಿಮ್ಮಲ್ಲಿ ತೋಡಿಕೊಳ್ಳಲು ಈ ಸಮಯದಲ್ಲಿ ಬಂದಿರುವೆ ?"

"ಆದರೆ ನನಗೀಗ ಹುಡುಗಿಯನ್ನು ನಮ್ಮ ತಂದೆ ನೋಡುತ್ತಿದ್ದಾರೆ. ಸುತ್ತಲೂ ಇಟ್ಟಿದ್ದ ಕನ್ಯೆಯರ ಭಾವ ಚಿತ್ರಗಳನ್ನು ತೋರುತ್ತಾ, 'ಇದೋ ನೋಡು, ಇದು ಆಂಧ್ರದೇಶದಾಕೆ, ಈಕೆ ಕರ್ನಾಟಕ, ಆಕೆ ಕೇರಳ, ಈಕೆ ಗುಜರಾತಿ, ಮರಾಠಿ, ಸಿಂಧಿ, ಪಂಜಾಬಿ, ಸೌರಾಷ್ಟ್ರ, ಮಾಳವ ಎಲ್ಲಾ ದೇಶದ ಕನ್ಯೆಯರ ಭಾವಚಿತ್ರಗಳನ್ನು ತರಿಸಿದ್ದಾರೆ. ನಾನೊಪ್ಪುವ ಹೆಣ್ಣಿಗೆ ಮದುವೆ ನಿಶ್ಚಯ ಮಾಡಬೇಕೆಂದಿದ್ದಾರೆ. ಅದಕ್ಕೆ ನನ್ನ ಉತ್ತರ ಕೊಟ್ಟೊ ಆಯಿತಲ್ಲ. ಸಿಂಧೂ ದೇಶದ ಹೆಣ್ಣನ್ನು ಒಪ್ಪಿ, ಒಪ್ಪಿಗೆ ನೀಡಿರುವೆ. ಮದುವೆ ಇನ್ನೆಂಟು ದಿನಗಳಿವೆ."

"ಇದು ನಿಜವೇ ?"

ಎಂದು ಹೇಳುತ್ತಿರುವಲ್ಲಿ ಮಾತು ತೊದಲಿಸಿ ಕಂಗಳಲ್ಲಿ ನೀರು ಬಂದು ಸುರಿಯಲಾರಂಭಿಸಿತು.

'ಮಲುಹಣಾ...ಮಲುಹಣಾ' ಎಂದು ಜೋರಾಗಿ ಕೂಗಿ ಬಿಡುವ ಮನಸ್ಸಾಯಿತು. ಆದರೆ ಕೂಗಲಿಲ್ಲ. ಆಕೆಗೆ ಗೊತ್ತಿಲ್ಲದಂತೆ ಈ ಚಿತ್ರ ಕಣ್ಮುಂದೆ ಸುಳಿದು ಹೋಯಿತು.

ಕೂಡಲೇ ತನ್ನ ಮಹಡಿಯ ಮೇಲಿನ ಕೋಣೆಗೆ ಹೊರಟಳು. ಮಂಚದ ಮೇಲ್ಹಾಸಿಗೆಯ ಮೇಲೆ ಸ್ವಲ್ಪ ಹೊತ್ತು ಗಡ್ಡದ ಮೇಲೆ ಕೈ ಹೊತ್ತು ಕುಳಿತಳು. ಕೂಡಲೇ ಮನಸ್ಸಿಗೇನೋ ಒಂದು ರೀತಿಯ ಸಂತೋಷವಾಯಿತು. ಪಕ್ಕದಲ್ಲಿದ್ದ ವೀಣೆಯನ್ನು ತೆಗೆದುಕೊಂಡು ನುಡಿಸಲಾರಂಭಿಸಿದಳು. ಆದರ ಮಧ್ಯೆ ಏನೋ ತಡ ಬಂದ ಹಾಗಾಯಿತು. ಕೂಡಲೇ ನಿಲ್ಲಿಸಿ ನೋಡಿದಳು. ಅದೇ ವ್ಯಕ್ತಿ. ಅಂದು ಕುದುರೆಯ ಮೇಲೆ ಬಂದು ನೋಡಿದ ವ್ಯಕ್ತಿ" ತುಸು ಹೊತ್ತು ಎವೆಯಿಕ್ಕದೆ ನೋಡಿದಳು. ಅಷ್ಟರಲ್ಲಿ ಊಟಕ್ಕೆ ಅಣಿ ಮಾಡಿತ್ತು. ಸ್ವರೂಪ್ ಬರುತ್ತಾ ಆಕೆಯ ಸ್ಥಿತಿಯನ್ನು ವೀಕ್ಷಿಸಿ..

"ಏಕೆ ಸಾಕಾಯಿತೇ ?"ನುಡಿಯನ್ನಾಲಿಸಿದ ಮಲುಹಣೆ ಬೆಚ್ಚಿ..

"ಏನಿಲ್ಲ" ಎಂದಳು.

"ಏನಿಲ್ಲ...ಈಗ"

" ಏನೂ ಇಲ್ಲ....ಅವರೂ ಇಲ್ಲ" ಎಂದು ಧ್ವನಿ ಗೂಡಿಸಿದಳು ಸ್ವರೂಪ್.

"ಅವರು ಎಂದರೆ ಯಾರು ?" ತಿಳಿಯದಂತೆ ಕೇಳಿದಳು ಮಲುಹಣೆ.

"ಕಳ್ಳಿ ನನಗೆ ಗೊತ್ತು ಬಿಡು. ಅಂದು ನೋಡಿದೆಯಲ್ಲಾ ಆತ"

"ಆತ, ಆತ ಯಾರು ?"

"ನೀನು ಬಯಸಿದನಲ್ಲ, ಅವನೀಗ ಇಲ್ಲ. ಏಕೆ ಸುಮ್ಮನೆ ಪೆಚ್ಚಳಂತೆ ನೋಡುತ್ತಿರುವೆ ?"

"ಹೌದು..."

"ಆದುದರಿಂದ ಆತನ ಕಲ್ಪನೆಯ ಭಾವವೆಂಬುದು ನಿಜವಾಯಿತಲ್ಲ"

"ಆತ...ಆತ ಎಂದರಾರು ? ಅವನಿಗೆ ಹೆಸರು ಇಲ್ಲವೇ ?"

"ಏಕಿಲ್ಲ ಎಲ್ಲಾ ಇವೆ, ಕೇಳ ಬಯಸುತ್ತೀಯಾ ?"

"ನೀನು ಹೇಳಬಯಸುತ್ತೀಯಾ ? ಹಾಗಾದರೆ ಹೇಳು ನೋಡೋಣ"

"ಅದೇ ಮಲುಹಣ ಮಹಾ ಧನಿಕ ಸುವರ್ಣ ಭಟ್ಟರ ಓರ್ವ ಪುತ್ರ ಸುಂದರ ಮಲುಹಣ...ಆದರೆ.."

"ಆದರೆ ಎಂಬ ಪದವನ್ನೇಕೆ ಮಾತಿನ ಕೊನೆಗೆ ಸೇರಿಸಿದೆ ?"

"ಆತನು ನಿನ್ನವನಾಗಲು ಸ್ವಲ್ಪ ಕಷ್ಟವೇ ?"

"ಏಕೆ ನಾನು ಚೆನ್ನಾಗಿಲ್ಲವೇ ?"

"ಶ್ರೇಷ್ಠ ಕುಲದವರು ವೇಶ್ಯೆಯನ್ನು ಮದುವೆ ಮಾಡಿಕೊಳ್ಳುತ್ತಾರೆಯೇ ?"

ಮಲುಹಣೆಗೆ ಸಪ್ಪೆ ಮೋರೆ ಬಿತ್ತು. ಆದರು ಚೇತರಿಸಿಕೊಂಡು.

"ಏಕಾಗಬಾರದು ?"

"ನಿನಗೆ ಮದುವೆ ಇಲ್ಲ"

"ಮತ್ತೇ...?"

"ಗೆಜ್ಜೆ ಪೂಜೆ"

"ಆದರೇನಾಯ್ತು ?"

" ಆತನನ್ನು ಪಡೆದರೂ ಆತನ ಯೌವನ, ಅರ್ಥವನ್ನು ಮಗುಃ ತ್ತಿದ್ದಂತೆಯೇ ಮರುಬೇಟೆಗೆ ಅಣಿಯಾಗಬೇಕಾಗುವುದು. ಹಿಂದೂ ಶಾಸ್ತ್ರ ಪ್ರಕಾರ ಮದುವೆ ಎಂದರೆ ಓರ್ವನೆ ಪತಿ. ಆದರೆ ನಿಮ್ಮಲ್ಲಿ..?"

"ಹಾಗೇ ನನಗೂ ಏಕೆ ಆಗಬಾರದು ?"

"ಅದು ನಿಮ್ಮ ಕುಲದಲ್ಲಿ ನಡೆದು ಬಂದಿಲ್ಲವಲ್ಲ"

"ಹಸುವಿನ ಕೆಚ್ಚಲಿನ ಮಾಂಸದಿಂದ ಬಂದ ಹಾಲು ಶಿವನಿಗೆ ಅರ್ಪಿತ ವಾಗುವುದಿಲ್ಲವೇ ? ಹಾಗೇಕೆ ಕೀಳು ಕುಲದಿಂದ ಬಂದ ನಾನು ಮಲುಹಣ ನೋರ್ವನಿಗೆ ಅರ್ಪಿತ ವಾಗಬಾರದು ?"

"ಅದಕ್ಕೆ ನಿಮ್ಮ ತಾಯಿ ಎಡೆಕೊಡಬೇಕಲ್ಲಾ ಹಣದಾಸೆಯಿಂದ"

"ನಾನು ತಿರಸ್ಕರಿಸಿದರೆ"

"ಅದು ಎಷ್ಟರ ಮಟ್ಟಿಗೆ ಸಾಧ್ಯ ಎಂಬುದನ್ನು ಕಾದು ನೋಡಬೇಕು"

"ಇಂದೇ ಮಾಡಿರುವ ಪಣ. ನೋಡುತ್ತಿರು, ನಾನು ಓರ್ವ ಪತಿಯನ್ನೇ ನಂಬಿ ನನ್ನ ಕುಲ ಕಸುಬನ್ನು ತೊರೆದು ಗರತಿಯಾಗುತ್ತೇನೆ."

"ಆದರೆ ಮಲುಹಣ ನಿನ್ನನ್ನು ವರಿಸುತ್ತಾನೆಂಬ ಖಾತ್ರಿಯಾದರೂ ಏನು...?"

"ದಿನವೂ ಆ ವಿಜಯೇಶ್ವರನಲ್ಲಿ ಬೇಡುತ್ತೇನೆ. ಆತನಿಗೆ ನನ್ನ ಯೌವನ ಮೀಸಲು, ನಾನು ದುಂಬಿ ಮುಟ್ಟಿದ ಹೂವು. ಎಷ್ಟು ದಿನವಾದರೂ ಆತನೇ ನನ್ನ ಪತಿ..."

"ಊಟ ಮಾಡು ಮಹರಾಯ್ತಿ....ಆಮೇಲೆ ಉಟವೂ ಸೇರದೇ ಹೋದೀತು"ಎಂದು ನಕ್ಕಳು.

"ಮಲುಹಣ..."

"ಇದೇನು ಭ್ರಮೆ..? ಕಣ್ಬಿಟ್ಟಿದ್ದರೂ ಈ ಹಗಲು ಗನಸೇ?" ಎಂದು ತನ್ನಲ್ಲೇ ನಕ್ಕಳು..

ಮತ್ತೆ ಆಕೆಯ ಮನಸ್ಸು ನಾನಾ ಆಸೆಗಳನ್ನು ಅಳೆದು ಸುರಿಯಿತು.

"ಇದು ಈ ಜನ್ಮದಲ್ಲಿ ಸಾಧ್ಯವೇ ?"

"ಸಾಧ್ಯವಾಗದೇ ಏನು ?. ಇದಾವ ಮಹಾ ಹೆಚ್ಚಿನ ಕೆಲಸ. ಹೆಣ್ಣೊಂದು ಗಂಡಸನ್ನು ಆಕರ್ಷಿಸಿ ಬಲೆಗೆ ಬೀಳಿಸಿಕೊಳ್ಳುವುದೂ ಒಂದು ದೊಡ್ಡ ಕೆಲಸವೆ ? ಕೇವಲ ಒಂದು ಮಾದಕ ನಗುವು ಅದಕ್ಕೆ ಸಾಲದೇ ?"

"ಹೇಗೆ ಹೇಳಲಿಕ್ಕೆ ಸಾಧ್ಯವಾಗುತ್ತದೆ ?"

"ಮಲುಹಣನಿಗೂ ನಿನ್ನನ್ನು ಕಂಡರೆ ತುಂಬಾ ಪ್ರೀತಿ ಇದೆ. ಆದುದರಿಂದಲೇ ನಿನ್ನನ್ನು ಅಂದು ಅಷ್ಟು ಹೊತ್ತು ನಿಂತು ನೋಡಿದುದು. ನೀನು ಹೇಗೆ ಆತನನ್ನು ನಿನ್ನವನನ್ನಾಗಿ ಮಾಡಿಕೊಳ್ಳಬೇಕೆಂದಿರುವೆಯೋ, ಆತನೂ ನಿನ್ನನ್ನು ಆತನವಳನ್ನಾಗಿ ಮಾಡಿಕೊಳ್ಳುವ ಹಂಬಲ ಇಟ್ಟುಕೊಂಡಿದ್ದಾನೆ"

"ಹೌದೆ, ಹಾಗಾದರೆ ನಾನೇ ಧನ್ಯಳು "

"ಹೌದು ...ನಿನ್ನ ಹಗಲುಗನಸು ನನಸಾಗಲು ಕೆಲವೇ ದಿನಗಳು ಉಳಿದಿವೆ"

"ನಾನೇ ಭಾಗ್ಯವತಿ ಹಾಗಾದರೆ"
"ಹೌದು ನಿಜವಾಗಿಯೂ ನೀನು ಭಾಗ್ಯವತಿ"

❋ ❋ ❋ ❋ ❋

ಇತ್ತ ಸುವರ್ಣ ಭಟ್ಟರ ಮನೆಯಲ್ಲಿ ಶೈವರು, ವೈಷ್ಣವರು, ರಾಜ್ಯ ನೆತನದವರೆಂಬ ಭೇದವಿಲ್ಲದೆ ಅನೇಕ ಜನರು ಸೇರಿದ್ದಾರೆ. ಮನೆಯ ಮುಂ ಹಸಿರು ತೋರಣ ಗಳು, ಚಪ್ಪರ, ನಾನಾ ವಿಧವಾದ ಹೂಗಳು ಮಾಲೆಗಳಿಂ ಅಲಂಕರಿಸಿದ್ದಾರೆ. ಜನರು ಕುಳಿತು ಕೊಳ್ಳಲು ಆಸನಗಳನ್ನು ಜೋಡಿ ಶ್ರೀಗಂಧ - ಹೂಗಳಿಂದ ಸ್ವಾಗತ ಬಯಸುತ್ತಿದ್ದಾರೆ. ಮಗನಿಗೆ ಉಪನಯ ಮಾಡುವ ಸಂತಸದಲ್ಲಿ ತಿರುಗಾಟ, ಸ್ವಾಗತ, ಪಾಕ ಕೋಣೆ, ನಾನಾ ಕಡೆ ಧ್ಯ ಹರಿಸುತ್ತಾ ಕಾರ್ಯದಲ್ಲಿ ನಿರತರಾಗಿದ್ದಾರೆ ಸುವರ್ಣ ಭಟ್ಟರು. ಅಂ ಪ್ರವರಸೇನ ಮಹಾರಾಜರು ಬರುವ ನಿರೀಕ್ಷೆಯಿತ್ತು, ಅವರಿಗಾಗಿ ಜನ ಕಾದರು ಜನರೆಲ್ಲಾ. ಶಾಸ್ತ್ರ - ಪೌರೋಹಿತ್ಯ ಒಂದೆಡೆ, ವೇದ ಘೋ ಮತ್ತೊಂದೆಡೆ ಆರಂಭವಾಗಿತ್ತು. ಅದರ ಮಧ್ಯೆ

"ರಾಜಾಧಿರಾಜ.....ರಾಜ ಪರಮೇಶ್ವರ, ಭಾರತೀ ಪೀಠಾಧೀಶ್ವ ಪ್ರವರಸೇನ ಮಹಾರಾಜರಿಗೆ ಜೈ ಪರಾಕ್...ಎಂಬ ಘೋಷಣೆ ಕೇಳಿ ಕೂಡಲೇ ಸುವರ್ಣ ಭಟ್ಟರು ಸ್ವಾಗತಿಸಲು ಓಡಿಬಂದರು, ಪ್ರವರಸೇ ಮಹಾರಾಜರನ್ನು ನೋಡಿ..

"ನಿಮ್ಮ ಬರುವಿಕೆಗೆ ಎಲ್ಲರೂ ಕಾದಿದ್ದಾರೆ. ತಮ್ಮಂಥ ಮಹ ಪ್ರಭುಗಳು ಸಾಮಾನ್ಯ ಮಿತ್ರನ ಆಮಂತ್ರಣಕ್ಕೆ ಒಪ್ಪಿ ಬಂದುದು ನಮ್ಮೆ ರಿಗೂ ಸಂತೋಷವಾಯಿತು. ಪಾದ ಬೆಳೆಸಬೇಕು, ದಯ ಮಾಡಿಸಬೇ ಎಂದು ಹಸ್ತಲಾಘವದಿಂದ ಕೆಳಗಿಳಿಸಿ, ರತ್ನಗಂಬಳಿಯ ಮೇಲೆ ನಡೆ ಕೊಂಡು ಮಂಟಪದ ಹತ್ತಿರಕ್ಕೆ ಕರೆತಂದು ಕುಳ್ಳಿರಿಸಿದರು. ಮಲುಹಣ ಅವರಿಗೆ ಕೈ ಮುಗಿದ. ಮಹಾರಾಜರೂ ಆಶೀರ್ವದಿಸಿದರು. ಜನರೆಲ್ಲಾ

ಜೋಡಿಸಿದರು. ಮಹಾ ಪ್ರಭುಗಳು ಎಲ್ಲರಿಗೂ ಪ್ರತಿ ವಂದಿಸಿ ಕುಳಿತರು. ಮಹಾ ಪ್ರಭುಗಳ ಅಪ್ಪಣೆಯ ಮೇರೆಗೆ ನೆರೆದ ಸಭಿಕರೆಲ್ಲಾ ಕುಳಿತರು.

ಮಲುಹಣನಿಗೆ ತಲೆಯನ್ನೆಲ್ಲಾ ಕತ್ತರಿಸಿ ಒಂದು ಸ್ವಲ್ಪ ಜುಟ್ಟನ್ನು ಹಿಂದೆ ಬಿಟ್ಟು, ಎಣ್ಣೆ ಸ್ನಾನ ಮಾಡಿಸಿ ಅರಿಸಿನ ಬಣ್ಣದ ನಾರು ಮುಡಿಯನ್ನು ಡಿಸಿ, ಹೋಮ ಮಾಡಿ, ಶಾಸ್ತ್ರೋಕ್ತವಾಗಿ ಜನಿವಾರವನ್ನು ಹಾಕಿ, ಶಲ್ಯವನ್ನು ಹೊದಿಸಿ, ಹಸೆಯ ಮೇಲೆ ಕುಳ್ಳಿರಿಸಿದ್ದರು. ಬಂದಿದ್ದ ಜನರೆಲ್ಲಾ ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ಮುಯ್ಯನ್ನಿಟ್ಟರು. ಮಹಾ ಪ್ರಭುಗಳು ಮುತ್ತಿನ ಹಾರವೊಂದನ್ನು ಹಾಕಿದರು. ಅದಕ್ಕೆ ಪ್ರತಿಯಾಗಿ ಫಲಪುಷ್ಪಗಳೊಂದಿಗೆ ನವರತ್ನಮಯವಾಗಿ ಒಂದು ಸರವನ್ನು ಸುವರ್ಣಭಟ್ಟರು ಅರ್ಪಿಸಿದರು. ಮಹಾಪ್ರಭುಗಳು ರಥವನ್ನು ಹತ್ತುವ ತನಕಲೂ ಸುವರ್ಣಭಟ್ಟರೂ ಹಾಗೂ ಜನರುಗಳು ಮರ್ಯಾದೆಯೊಂದಿಗೆ ಬೀಳ್ಕೊಟ್ಟರು.

ಸುವರ್ಣಭಟ್ಟರ ಆನಂದಕ್ಕೆ ಪಾರವೇ ಇಲ್ಲದಾಯಿತು. ಶಾಸ್ತ್ರವೆಲ್ಲಾ ಮುಗಿಯಲು ಮಲುಹಣನು ಬಂದು ತಂದೆಗೆ ದೀರ್ಘದಂಡ ನಮಸ್ಕಾರ ಪೆರಗಲು ಅವರ ಕಣ್ಣುಗಳು ಒದ್ದೆಯಾದವು. ಕೂಡಲೇ ಎರಡು ಹನಿ ಮಲು ಹಣನ ಮೇಲೆ ಉದುರಿತು. ಅದನ್ನು ನೋಡಿದ ಮಗು..

"ಅಪ್ಪಾಜಿ...ಏಕೆ ಕಣ್ಣೀರು ?" ಎಂದ.

ಮಗನ ಪ್ರಶ್ನೆಗೆ ತಂದೆ ಮಾರುತ್ತರ ನೀಡುತ್ತಾ..

"ಮಗೂ ಇದು ದುಃಖದ ಕಣ್ಣೀರಲ್ಲಾ; ಸಂತಸದ ಅಶ್ರು. ಅಷ್ಟು ದಿನದಿಂದ ನಿನಗೆ ಉಪನಯನವನ್ನು ಮಾಡಿ, ಕಣ್ಣಾರೆ ನೋಡಿ ಸಂತೋಷ ಪಡಬೇಕೆಂದಿದ್ದೆ. ಅದು ಇಂದಿ ಸಾರ್ಥಕವಾಯಿತು. ಆದರೆ..." ಎಂದು ಮತ್ತೆ ಕಂಗಳಲ್ಲಿ ನೀರು ತುಂಬಿಕೊಂಡರು. ಅದನ್ನು ನೋಡಿದ ಮಗನು.....

"ಏನಪ್ಪಾಜಿ...? ಆದರೆ...ಎನ್ನುತ್ತಿದ್ದಂತೆಯೇ ಗದ್ಗ ಬಿಗಿಯಿತು."

"ನಿನಗೆ ಸರಿಹೊಂದುವ ಒಬ್ಬ ಕನ್ಯೆಯನ್ನು ನೋಡಿ ವಿವಾಹ ಮಾಡಿ ಕಣ್ತುಂಬ ನೋಡಬೇಕು ಎಂಬ ಹಂಬಲ ನನ್ನನ್ನು ಕಾಡಿಸುತ್ತಿದೆ."

"ಅದು ಸಹಜವೇ ತಾನೇ ಬಿಡಿ ಅಪ್ಪಾಜಿ. ಒಂದಲ್ಲ ಒಂದು ದಿ
ಅದು ಆಗುತ್ತದೆ. ಅದಕ್ಕೇಕೆ ಈಗಿನಿಂದ ತಲೆಗೆ ಹಚ್ಚಿಕೊಳ್ಳಬೇಕು ?"

"ಅದು ತಂದೆಯ ಪಾಲಿನ ಕರ್ತವ್ಯವಲ್ಲವೇ? ಮಗೂ...ಪ್ರಾಯ
ಬಂದ ಮಗನ ಯೌವನ ಸಾರ್ಥಕವಾಗಬೇಕಲ್ಲವೇ ?"

"ಹೌದು..ಅದೂ ಸಹಜವೇ, ಆದರೆ ನನ್ನಲ್ಲಿನ ಕಾತುರತೆ ಈಗಲೇ
ಮಾಡಿ ನೋಡಬೇಕೆನಿಸುತ್ತದೆ. ಆ ದಿನಗಳು ಅದೆಷ್ಟು ಬೇಗನೆ ಬರುವುದೋ
ಎಂದು ಹಾರೈಸುತ್ತಿದ್ದೇನೆ "

"ಆಗಲೀ ಅಪ್ಪಾಜಿ"

ಮಾಗನ ಮಾತನ್ನು ಕೇಳಿ ಹರಿಸುತ್ತಾ ಸಂತಸವಾಗಿ,

"ಮಗನೇ ಆಯುಷ್ಯವಂತನಾಗಿ, ಐಶ್ವರ್ಯವಂತನಾಗಿ ಬೇಗ
ಮದುವೆ ಆಗಿ ಬಾಯಿಯನ್ನು ಹೀಗೇ ಸಿಹಿ ಮಾಡಪ್ಪಾ"

ಎನ್ನುತ್ತಿರಲು ಮಲುಹಣನು ತಂದೆಯ ಆಸೆಯನ್ನು ಮನದಲ್ಲೇ
ಲೆಕ್ಕ ಹಾಕುತ್ತಾ..

"ಮನುಷ್ಯನ ಆಸೆಗೆ ಮೊದಲೆಂತು ? ಕೊನೆಯೆಂತು ? ಈಗ
ಉಪನಯನವಾಯಿತು. ಆಮೇಲೆ ಮದುವೆ, ಹೊಸಗೆ, ಮಗು, ಗಂಡಾದರೆ
ಹೆಣ್ಣು...ಹೀಗೆ ಒಂದರ ಮೇಲೊಂದು ಕೂಡುತ್ತಲೇ ಹೋಗುತ್ತವೆಯೇ
ಹೊರತು ಮನುಷ್ಯನ ಜನ್ಮಕ್ಕೆ ಆಸೆಗಳು ಮುಗಿದವು ಎಂದು ಹೇಳಲಿಕ್ಕೇ
ಬರುವುದಿಲ್ಲ"

...ಎನ್ನುತ್ತಾ ತನ್ನ ಕೋಣೆಯತ್ತ ಹೊರಟ. ಎಲ್ಲರ ಭೂರಿ ದಕ್ಷಿಣೆ
ಗಳೊಂದಿಗೆ ಮಲುಹಣನನ್ನೂ, ಸುವರ್ಣಭಟ್ಟರನ್ನೂ ಹರಸಿ ಹೊಗಳಿ ಹೊರ
ಟರು. ಮಲುಹಣನ ಮುಂಜಿ ವಿಜೃಂಭಣೆಯಿಂದ ಸಾಗಿ, ರಾತ್ರಿ ಊರಸುತ್ತಾ
ಮೆರವಣಿಗೆ, ರಥದ ಮೇಲೆ ವಿಜಯೇಶ್ವರ ದೇವಾಲಯದತ್ತ ಹೊರಟಿತು.

ಓಲಗದ ಶಬ್ದ ಕಿವಿಗೆ ಬಿದ್ದಕೂಡಲೇ ತನ್ನ ಕೋಣೆಯಲ್ಲಿ ಸಿಂಗರಿಸಿ
ಕೊಳ್ಳುತ್ತಿದ್ದ ಮಲುಹಣೆ ಕಚೆ ... ಬಂದು

ನಿಂತಳು. ರಥದಲ್ಲಿ ಕುಳಿತಿದ್ದ ವ್ಯಕ್ತಿಯ ಅಲಂಕಾರ ವಿಚಿತ್ರವಾಗಿತ್ತು. ಅಷ್ಟರಲ್ಲೇ ಸ್ವರೂಪ್, ಸರೋಜ್ ಬಂದರು. ಅವರನ್ನುದ್ದೇಶಿಸಿ ಮಲುಹಣ..

"ಬನ್ನಿ...ಬನ್ನಿ...ನೋಡಿ ಅಲ್ಲಿನ ವಿಚಿತ್ರ ವ್ಯಕ್ತಿಯನ್ನೂ...ಆತನ ವೇಷ ಭೂಷಣ ನೋಡಿ."

"ಅಯ್ಯೋ ಇನ್ನೂ ಗೊತ್ತೇ ಆಗಲಿಲ್ಲವೇ ? ಆತನು ಯಾರು ಅಂತ?"

ಸ್ವರೂಪ್ ಮಾತು ಬೆರೆಸಿದಳು.

"ಯಾರು.....?"

" ಆತ ಮಲುಹಣ"

"ಸುವರ್ಣಭಟ್ಟರ ಮಗ" ಸ್ವರೂಪ್ ಸೇರಿಸಿದಳು. ಆಕೆಯ ಮಾತಿಗೆ..

"ಇದೇನು ಮಾಡ್ತಾ ಇದ್ದಾರೆ ?"

"ಮೆರವಣಿಗೆ" ಎಂದಳು ಸರೋಜ್.

"ಅದನ್ನೇ ಏಕೆ ಅಂತ ಕೇಳ್ತಾ ಇದ್ದೇನೆ."

"ಆತನಿಗೆ ಉಪನಯನ ಈ ಹೊತ್ತು" ಸ್ವರೂಪಳ ಉತ್ತರ.

ಅರ್ಥವಾಗದೆ ಸ್ವಲ್ಪ ಹೊತ್ತು ತಿಣುಕಿ...

"ಹಾಗಂದ್ರೆನು ಮದುವೆನೇ ?"ಎಂದಳು ಅನುಮಾನದಲ್ಲಿ ಸಿಲುಕಿ.

"ಹೌದು..." ಎಂದಳು ಸರೋಜ್ ಛೇಡಿಸಲು.

ಮಲುಹಣೆಗೆ ಮುಖ ಕಪ್ಪಿಟ್ಟಂತಾಯಿತು. ಅದನ್ನು ಗಮನಿಸಿದ ಸ್ವರೂಪ್..

"ಇಲ್ಲಮ್ಮ....ಜನಿವಾರ ಹಾಕಿ ಮುಂಜಿ ಅಂತ ಮಾಡ್ತಾರೆ. ಈ ಹೊತ್ತು ಊರವರಿಗೆಲ್ಲಾ ಅವರ ಮನೆಯಲ್ಲಿ ಊಟವಾಯ್ತು. ಈಗ ಮೆರವಣಿಗೆ, ವಿಜಯೇಶ್ವರ ದೇವಾಲಯದಲ್ಲಿ ಪೂಜೆ. ಅದೋ ನೋಡು ಆಂಧ್ರದೇಶದ ದೇವದಾಸಿಯರನ್ನು ಕರೆಸಿ ಮೇಳ ಮಾಡಿಸಿಕೊಂಡು ಬರುತ್ತಾ ಇದ್ದಾರೆ "

"ಏಕೆ ನಮ್ಮ ರಾಜ್ಯದವರನ್ನೇಕೆ ಆರಿಸಲಿಲ್ಲ ?"

"ಬೇರೆಯ ರಾಜ್ಯದವರಿಂದ ಜನರ ಮನಸ್ಸಿಗೆ ಆಕರ್ಷಕ ಅ

"ಹಾಗಾದರೆ ಮದುವೆ ಆಗಿಲ್ಲ...' ಎಂದಳು ಅಳುಕಿನಿಂದ.

'ಇಲ್ಲ....'

"ಏಕೆ ನೀನು ಆರಿಸಿಕೊಂಡ ರಸಿಕನನ್ನು ಮತ್ತೆ ಯಾರ ಹೊಡೆದುಕೊಂಡು ಬಿಟ್ಟಾರು ಅಂತೇನು ?"ಎಂದಳು ಅಣಕಿಸುವ ದನಿ ಸರೋಜ್.

"ಅದಕ್ಕೆ, ಆ ಕಾತುರ ಆಕೆಗೆ ?" ಸ್ವರೂಪ್ ಚಡಪಡಿಸಿದಳು.

"ಅಂತೂ ಈ ಆವಾಂತರದಲ್ಲಿ ನನಗೆ ಯಾರು ಅನ್ನೋದೆ ಗೊ ಲಿಲ್ಲ"

"ನಿನ್ನವನಾಗೋ ತನಕ ನಿನ್ಗೆ ಗೊತ್ತಾಗೋದಿಲ್ಲ, ಅಲ್ವೇನು?

"ಹೌದು....ಹೌದು.."

ಎಂದು ಇಬ್ಬರೂ ನಗಲಾರಂಭಿಸಿದರು. ಈ ದೃಶ್ಯವನ್ನು ನೋ ಮಲುಹಣ ಕೆಳಗೆ ಮುಖ ಮಾಡಿ ತನ್ನ ರೂಪವನ್ನು ತೋರ್ಪಡಿಸಿ ತನಗೇ ನಾಚಿಕೆಯಾಗಿ ಬಗ್ಗಿ ಕುಳಿತ. ಆದರೂ ಮಲುಹಣೆಯ ಸೌಂ ವನ್ನು ನೋಡುವ ಆಸೆ ಮನದಲ್ಲಿ ಮಿಗಿಲಾಗಿ ಚಿಗುರಲು ಆಗಾಗ ಆ ನೋಡುತ್ತಿದ್ದನು. ಪಕ್ಕದಲ್ಲಿದ್ದ ಮಿತ್ರ ವಿಜಯ್ ಮತ್ತು ಜಯ ನಗುತ್ತಾ...

"ಚೆನ್ನಾಗಿಯೇ ನೋಡಪ್ಪಾ ಏಕೆ ನಾಚಿಕೆ?" ಎಂದರು.

ಮೆರವಣಿಗೆಯು ಸಂಭ್ರಮದಲ್ಲಿ ಆಕೆಯ ಮನೆಯನ್ನು ದಾ ಯೇಶ್ವರ ದೇವಾಲಯದತ್ತ ಹೊರಟಿತು. ಆತನನ್ನೇ ದೂರದವ ನೋಡುತ್ತಾ ನಿಂತಳು ಮಲುಹಣೆ. ತದೇಕ ಚಿತ್ತದಿಂದ ಆಕೆಯನ್ನು ನೋ ಸ್ವರೂಪ್..

"ಅವರು ಬಹಳ ದೂರ ಹೋದರು. ನಡೆಯಿರಿ ಮಲ ವಿರಂತೆ" ಎಂದು ನಕ್ಕಳು. ಸರೋಜ್ ತೋಳುಗಳನ್ನು ಹಿಡಿದು ಅ

ನಗಲು ಬೆಚ್ಚಿದ ಮಲುಹಣೆ ಜಿಂಕೆಯಂತೆ ತನ್ನ ಕೊರಳನ್ನು ತಿರುಗಿಸಿ ಕೋಣೆಯತ್ತ ಮೆಲ್ಲನೆ ನಡೆದಳು.

ಅಂದಿನ ಚಂದ್ರನ ಬೆಳದಿಂಗಳಲ್ಲಿ ಮೆರವಣಿಗೆ ವಿಜಯೇಶ್ವರನ ದೇವಾಲಯಕ್ಕೆ ಬಂದು, ಅಲ್ಲಿ ಪೂಜೆಯನ್ನು ಮುಗಿಸಿಕೊಂಡು ಮತ್ತೆ ಊರು ಸುತ್ತಿಕೊಂಡು ಮನೆಯನ್ನು ತಲುಪಿತು. ಸುವರ್ಣ ಭಟ್ಟರಿಗೆ ಆದ ಆನಂದ ಇದರಿಂದ ಅಷ್ಟಿಷ್ಟಲ್ಲ.



ಮನೆಯ ಒಳಗೂ, ಮನದ ಒಳಗೂ ಮಲುಹಣನ ಚಿತ್ರವೇ ಸುಳಿಯಿತು. ಓದುವ ಪುಸ್ತಕ, ಹಾಡುವ ವೀಣೆಯಲ್ಲಿ, ಎಚ್ಚರದಲ್ಲಿ ಕನಸಿನಲ್ಲಿ ಬಂದು ಕಲಕಿದ ಮಲುಹಣೆಯನ್ನು, ನಾಳೆ ಶಿವರಾತ್ರಿ, ವಿಜಯೇಶ್ವರನ ದೇವಾಲಯದಲ್ಲಿ ವಿಶೇಷ ಪೂಜೆ, ಕಾಶ್ಮೀರಕ್ಕೆ, ಕಾಶ್ಮೀರದ ಜನಗಳಿಗೇ ಮುಖ್ಯ ಜಾತ್ರೆ, ದೇಶದ ನಾನಾ ಭಾಗಗಳಿಂದ ಜನರು ಸೇರುವರು. ಅಂಥ ಸಂದರ್ಭದಲ್ಲಿ ಮಲುಹಣನು ಇಲ್ಲಿಗೆ ಬರದೇ ಇಲ್ಲ ಎಂದು ಯೋಚಿಸಿದಳು ಮಲುಹಣೆ. ಅತ್ತ ಮಲುಹಣನಿಗೂ ಮಲುಹಣೆಯ ಭಾವ ಚಿತ್ರಗಳು ಎಲ್ಲೆಲ್ಲೂ ಇಣುಕಿ ಅತನನ್ನು ಹುಚ್ಚನನ್ನಾಗಿ ಮಾಡಿತ್ತು. ಆತನೂ ಮಲುಹಣೆಯಂತೆಯೇ ಯೋಚಿಸಿ, ನಾಳೆ ಸೋಮವಾರ ಜಾತ್ರೆಗೆ ಬರುವ ಮನಸ್ಸು ಮಾಡಿದ. ಮರು ನೋಟದಿಂದಲೇ ತೃಪ್ತಿ ಸಿಗುವುದೆಂದು ಆತನ ಮನಸ್ಸು ತುಟಿದುಕೊಂಡಿತು.

ಮಂಚದ ಮೇಲೆ ಅಸ್ತವ್ಯಸ್ತವಾಗಿ ಮಲುಹಣೆ ಮಲಗಿದ್ದಳು. ಅತ್ತಿಂದ ಸ್ವರೂಪ್ ಬಂದು ಆಕೆಯನ್ನೇ ಸ್ವಲ್ಪ ಹೊತ್ತು ನೋಡಿದರು. ಯಾವುದೋ ಗಾಢವಾದ ಯೋಚನೆಯಲ್ಲಿದ್ದಂತೆ ಕಂಡಿತು. ಯಾವುದೋ ಒಂದು ದೃಶ್ಯವನ್ನೂ ನೋಡುತ್ತಿದ್ದ ಮಲುಹಣೆಯನ್ನು ನೋಡಿ ಸ್ವರೂಪ್, ಸರೋಜಳೊಂದಿಗೆ...

"ನೋಡಿದೆಯಾ ಆಕೆಯ ಸ್ಥಿತಿಯನ್ನು ?"

"ಏನಾಗಿದೆಯಂತೆ ?"

"ಯೋಚನೆ ?"

"ಏನು ಯೋಚನೆ ?"

"ಆ ಮಲುಹಣನ ಯೋಚನೆಯನ್ನೇ ಮಾಡುತ್ತಾ ಇರಬಹುದು

"ಹುಚ್ಚು.......ಬರೇ ಹುಚ್ಚು. ಆತ ಬಂದ ಕೈ ಹಿಡಿದ. ಇವೆ ಹೊತ್ತು ಹೋಗದ ಮಾತು"

"ಯಾರಿಗೆ ಗೊತ್ತು ? ರೂಪು ಸೂರೆಗೊಂಡು ಬಂದರೂ ಬ ಬಹುದು."

"ಆತನು ಬಂದರೂ...ಆತನ ತಂದೆ."

"ಅದನ್ನು ಹೇಳಲಿಕ್ಕೆ ಬರುವುದಿಲ್ಲ."

ಮಾತನ್ನು ಹೆಚ್ಚಾಗಿ ಬೆಳೆಸಿದರೆ ಸರಿಯಿಲ್ಲವೆಂದು ಮೆಲ್ಲನೆ ಆಕ ಹತ್ತಿರ ಬಂದು ಸ್ವರೂಪ್ ಮೆಲ್ಲನೆ ಬೆನ್ನ ಮೇಲೆ ತಟ್ಟಲು ಮಲುಹಣ

"ಹಾಯ್...ಇದು ಯಾರಪ್ಪಾ ಅನ್ತೀನಿ" ಎಂದು ತಲೆಯ ಮೇಲೆತ್ತಿ ನೋಡುತ್ತಿರಲು..

"ನಾವೇನೂ..ನಿಮ್ಮವರಲ್ಲ."

" ಅಲ್ಲದೆ ಏನು. ?"

"ಯಜಮಾನರಲ್ಲ"

"ಗೊತ್ತಾಗುತ್ತದಲ್ಲ ನಿಮ್ಮ ಹೆಣ್ಣು ರೂಪು ನೋಡಿದರೇ ?"

ಸ್ವರೂಪ್ ತನ್ನ ಮಾತನ್ನು ಬೆಳೆಸಲು

"ಆಕೆಗೆ ಈಗ ಬೇಕಾಗಿರುವುದು ಗಂಡು"

"ಅದರಲ್ಲೂ ಮಲುಹಣ ಅಲ್ಲವೇ ? ಎಂದು ಸೇರಿಸಿ ಸರೋಜ್.

"ಅದನ್ನು ಕೊಡಲು ನನಗೆ ಆಗುವುದಿಲ್ಲ. ನಿನಗೂ ಆಗ ಆಕೆಯೇ ಒದಗಿಸಿಕೊಳ್ಳಬೇಕು" ಎಂದು ಮಾತು ಮುಗಿಸಿದಳು ಸ್ವರೂ

"ಇಂದು ಶಿವರಾತ್ರಿ ಅಲ್ಲವೇ ಸರೋಜ್" ಎಂದಳು ಮುಣ್ದನಿಯಲ್ಲಿ ಮಲುಹಣೆ..

"ಹೌದು..."

"ನೀವು ವಿಜಯೇಶ್ವರನ ಜಾತ್ರೆಗೆ ಹೋಗುವುದಿಲ್ಲವೇ ?"

"ಇಲ್ಲ..."

"ಏಕೆ...?"

"ವರ್ಷ..ವರ್ಷ ನೋಡುತ್ತಿರುತ್ತೇವೆ ಅಂತ"

"ಬೇರೆ ಬೇರೆ ದೇಶಗಳಿಂದ ಹೊಸ ಹೊಸಬರು ಬರುವುದಿಲ್ಲವೇ ? ಆಕರ್ಷಣೆ ಇರುವುದಿಲ್ಲವೇ?" ಎಂದಳು ಮಲುಹಣೆ.

"ಅದು ಸರಿ ಏಕೆ ಈ ಸಾರಿ ಇಷ್ಟೊಂದು ಹಿಂಸೆ ಮಾಡುತ್ತಿರುವೆ ?"

ಕೂಡಲೇ ಸರೋಜ್..

"ಏಕೆ ಗೊತ್ತೇ ? ಆಕೆ ಸಂಚು, ಜಾತ್ರೆಗೆ ಮಲುಹಣ ಬರುತ್ತಾನೆ. ಆ ವಿಜಯೇಶ್ವರನ ಜತೆಗೆ ತನ್ನ ಕಾಮೇಶ್ವರನನ್ನೂ ನೋಡಬಹುದು ಅಂತ"

"ಹೌದು...ಹೌದು ಅದು ಅಕ್ಷರಶಃ ಸತ್ಯ. ಹಾಗಾದರೆ ಹೋಗೋಣ ಬಿಡೇ " ಎಂದಳು ಸ್ವರೂಪ್

"ನಾಳೆ ನಾನೂ ಜಾಗರಣೆ ಮತ್ತು ಒಂದು ಹೊತ್ತು ಉಪವಾಸ"

ಎಂದಲು ಮಲುಹಣೆ.

"ಏಕೆ ಮಲುಹಣ ಬೇಗ ಕೈ ವಶವಾಗಲೆಂದೇ ?" ನಟಿಸುವ ದನಿಯಲ್ಲಿ ಉಲಿದಳು ಸರೋಜ್.

"ಮಲುಹಣ ಹೇಗಾದರೂ ಬರುತ್ತಾನೆ. ಆತನನ್ನೇ ನೋಡಿ ಹೊಟ್ಟೆ ತುಂಬಿಸಿಕೊಳ್ಳುವಾಗ ಆದು ಒಂದು ಹೊತ್ತೂ ಬೇಕಾಗುವುದಿಲ್ಲ. ಜಾಗರಣೆ ಏಕೆಂದರೆ ಅತನನ್ನು ನೋಡುತ್ತಾ, ನೋಡುತ್ತಾ ನಿದ್ದೆಯು ಹೇಗಾದರೂ ಬರುವುದಿಲ್ಲ. ಅಷ್ಟು ಸಾಧಿಸಿಕೊಂಡು ಪುಣ್ಯವನ್ನು ಗಿಟ್ಟಿಸಿಕೊಳ್ಳಬಹುದೆಂದು ಜಾಣತನ ಹೂಡಿದ್ದಾಳೆ ಮಲುಹಣೆ ಅಲ್ಲವೇ ?"

"ಸರೋಜ್,ನಿನ್ನ ಕಲ್ಪನೆ ಯಾರ ಕಿವಿಗೂ ಇಲ್ಲ. ನೀನು ಜನ್ಮದಲ್ಲಿ ಕವಯತ್ರಿಯಾಗಿ ಹುಟ್ಟಿದ್ದೀಯೋ ಏನೋ ?"

"ಕವಿಯ ಕೈ ಹಿಡಿಯುವ ನೀವು ಕವಯತ್ರಿಯಾಗಿ ತಾಯ... ಗೇಕೆ?"

"ಸರಿ ಬೇಗ ಬೇಗ ನಡೆಯಿರಿ ಜಾತ್ರೆಗೆ ಹೋಗೋಣ."

"ನಮ್ಮದೇನು ಸಿದ್ಧ..."

"ಜಾಗರಣೆ ಉಂಟೋ ?"

'ಹರೆಯದ ಹೊರೆ ಹೊತ್ತ ಮಲುಹಣನ ರೂಪ ಲಾವಣ್ಯ... ನೋಡುವ್ರವರಲ್ಲಿ ಜಾಗರಣೆಯು ಸುಸೂತ್ರವಾಗಿಯೇ ನಡೆಯು... ಅದರಲ್ಲಿ ಇಂದ್ರಿಯ ನಿಗ್ರಹ ಎಲ್ಲಿ ಬಂತು ?"

.....ಮಾತನ್ನು ಹೆಚ್ಚು ಆಡುವುದರಲ್ಲಿ ಅರ್ಥವೂ ಇಲ್ಲ. ಹು... ಇಲ್ಲ ಎಂದು ತಿಳಿದ ಮಲುಹಣೆ ಮುಂದಾದಳು. ಸ್ನೇಹಿತೆಯರು ಆಕೆ... ಹಿಂಬಾಲಿಸಿದರು.

ವಿಜಯೇಶ್ವರನ ದೇವಾಲಯದಲ್ಲಿ ಜಾತ್ರೆಗಾಗಿ ಅಂದವಾದ ... ಟಗಳಿಂದ ರಥವು ಸಿದ್ಧವಾಗಿತ್ತು. ಮಂಗಳವಾದ್ಯಗಳು ದೇವಾಲಯದ ... ಹೊರಗೆ ನಾದಗೊಟ್ಟು ಶುಭವನ್ನು ಕೋರುತ್ತಿದ್ದವು. ಶಿವರಾತ್ರಿಗೆ ಚಳಿ ... ಶಿವ ಅಂತ ಹೋಗಲು ಸ್ವಲ್ಪ ಹೆಚ್ಚಾಗಿ ದೇಹವನ್ನು ಕಟ ಕಟ ಅನ್ನಿಸುತ್ತಿ... ಬಿಸಿಲು ಏರುತ್ತಾ ಏರುತ್ತಾ ಅದು ಮಾಯವಾಯಿತು. ದೇಶದ ... ಕಡೆಗಳಿಂದ ಚಿಕ್ಕವರು, ದೊಡ್ಡವರು, ಬಡವ ಬಲ್ಲಿದರೆಂಬ ಭೇದವಿ... ಸೇರಿದ್ದರು.

ಅಲ್ಲಲ್ಲಿ ಜೂಜಿನ ಕಟ್ಟೆಗಳು, ಅಲಂಕಾರ ವಸ್ತುಗಳು ವಿವಿಧ ... ಗಳು ಇದ್ದವು. ಜಾತ್ರೆಯ ವೈಭವ, ಕಾಶ್ಮೀರದ ಪ್ರಕೃತಿ ಸೌಂದರ್ಯ... ನೋಡಿ ಆನಂದಿಸಲು ಹೊರಗಿನ ದೇಶಗಳಿಂದೆಲ್ಲಾ ಜನ ಬಂದು ... ಯುತ್ತಾರೆ ಎಂಬುದನ್ನು ಯೋಚಿಸಿ ಮಲುಹಣನು ಮಿತ್ರರೊಡನೆ ...

ದ್ದನು. ದೇವಾಲಯಕ್ಕೆ ಹೋಗಿ ಪೂಜೆ ಮುಗಿಸಿಕೊಂಡು ಮಲುಹಣ, ಜಯದೇವ್, ವಿಜಯ್ ಹೊರಬಂದರು. ದೇವಾಲಯದ ಪಕ್ಕದಲ್ಲಿ ಕೋಮರೆಯಾದ ಮಲುಹಣೆ ದೇವಾಲಯಕ್ಕೆ ಹೋಗಲು ಹಣ್ಣು ಹೂವು ಗಳನ್ನು ಹಿಡಿದುಕೊಂಡು ನಿಂತಿದ್ದಳು. ಮಲುಹಣನು ಅನಿರೀಕ್ಷಿತವಾಗಿ ಆಕೆಯನ್ನು ತಾಕಲು ಹೂವು ಹಣ್ಣು ಕೆಳಗೆ ಉರುಳಿದವು. ಆಕೆಯ ಸ್ಪರ್ಶ ಆತನಿಗೆ ರೋಮಾಂಚನವಾಯಿತು. ಮಲುಹಣನನ್ನು ಆಕೆ ದಿಟ್ಟಿಸಿ ನೋಡಿದಳು ಕೋಪವಿಲ್ಲದೆ. ಮಲುಹಣನು ಆಕೆಯ ಸೌಂದರ್ಯವನ್ನು ಹತ್ತಿರದಲ್ಲೇ ಸವಿದನು. ಹಿಂದಿನ ದಿನ ಕಂಡಿದ್ದ ಕನಸು ಇಂದು ನಿಜ ಸ್ವರ್ಗದ ಸವಿಕೊಟ್ಟಿತ್ತು. ಮೈ ಕೈ ತುಂಬಿಕೊಂಡು ರಸ ತುಂಬಿದ ಹಣ್ಣು ಅಪ್ಸರೆಯಂತೆ ಕಂಡಳು. ಎವೆಯಿಕ್ಕದೆ ಇಬ್ಬರೂ ನೋಡಿದರು. ತೃಪ್ತಿಯಾಗಲಿಲ್ಲ. ಮತ್ತಷ್ಟು ನೋಡುವ ಬಯಕೆ ಇದ್ದರೂ ಇಬ್ಬರೂ ಮುಂದೆ ಹೋಗದೆ ವಿಧಿಯಿರಲಿಲ್ಲ. ಎಲ್ಲವನ್ನೂ ಮೆಲ್ಲಗೆ ಆರಿಸಿಕೊಂಡು ಕೆಳದಿಯರು ಒಳಗಡೆ ಹೋಗುತ್ತಾ ಸ್ವರೂಪ್,

"ಏನಮ್ಮಾ ಸಾಕಾಯಿತೇ ಸ್ಪರ್ಶ..ಸದ್ಯ ಅವರ ದರ್ಶನ ಸಿಕ್ಕಿತಲ್ಲಾ, ಇನ್ನು ವಿಜಯೇಶ್ವರನದೇನು ? ಮೊದಲು ಆತನಿಗೆ ನಿನ್ನ ಫಲಗಳು ಅರ್ಪಿತ ವಾದವು.

"ಸದ್ಯ ಸರಿಯಾಗಿ ವಿಜಯೇಶ್ವರನನ್ನು ಪೂಜಿಸು, ಹೊರಗಡೆ ಹೋಗುವಾಗ ಮತ್ತೊಮ್ಮೆ ಅವರ ದರ್ಶನವಾಗಬಹುದು' ಎಂದಳು ಸರೋಜ್ ನಗುವಿನ ಮಧ್ಯೆ.

ಮಲುಹಣೆ ಧೃತಿಗತಿ ನಡಿಗೆಯಲ್ಲಿ ದೇವಾಲಯದ ಒಳಾಂಗಣವನ್ನು ಹೊಕ್ಕಳು.

ಇತ್ತ ಮಲುಹಣನನ್ನು ಸ್ನೇಹಿತ ವಿಜಯ್..

"ಏನಪ್ಪಾ ಮಲುಹಣ ದೇವರೇ, ರೋಗಿ ಬಯಸಿದುದೂ ಹಾಲೇ... ವೈದ್ಯರು ಹೇಳಿದುದೂ ಹಾಲೇ ಎಂಬಂತೆ ದರ್ಶನ ಸಿಕ್ಕಿಬಿಟ್ಟಿತು"

"ಮನಸ್ಸಿನಂತೆ ಮಹಾದೇವಾ ಅಲ್ಲವೆ ಮಲುಹಣಾ" ಎಂದ
ದೇವ್

ವಿಜಯ ಆತನ ಮನೋರಥವನ್ನು ಅರ್ಥಮಾಡಿಕೊಂಡು,

"ಈಗೆಲ್ಲಾ ಸಾರು ಎನ್ನಿಸುತ್ತದೆ, ಆತನು ಆಕೆಯ ಬರುವ ಯನ್ನು ನೋಡಿ ಕಂಗಳಿಂದ ಆಕೆಯ ಚೆಲುವನ್ನು ಹೀರಬೇಕಾಗಿದ"

"ಅದು ನಿಜ. ಇಲ್ಲೇ ಇರೋಣ, ಈ ಪಕ್ಕದಲ್ಲಿ ಜೂಜಾಟ ತ್ತಲೋ, ನೋಡುತ್ತಲೋ ನಿಲ್ಲೋಣ. ಆಮೇಲೆ ಆಕೆ ಬಂದಕ ನೋಡಿಕೊಂಡು ಹೋಗಬಹುದಲ್ಲವೇ ?"

"ನೀವು ಹೇಗೆ ಹೇಳಿದರೆ ಹಾಗೆ ನಾನು " ಎಂದ ಮ ಜಯದೇವನ ಪ್ರಶ್ನೆಗೆ ಉತ್ತರವಾಗಿ.

"ಸ್ವಲ್ಪ ಹೊತ್ತು ಮೂವರೂ ಜಾತ್ರೆಯ ವೈಭವವನ್ನು ಲಾರಂಭಿಸಿದರು, ಜನರನ್ನು ನೋಡಿದರು. "ಜನ ಮರುಳೋ... ಮರುಳೋ" ಎಂಬುದು ಇದಕ್ಕೇ ಅಲ್ಲವೇ ? ಎಂದುಕೊಂಡ ಮನಸ್ಸಿನಲ್ಲೇ ಮಲುಹಣ. ಹೊರಗಡೆ ಬಂದಳು ಮಲುಹಣ ಸ್ನೇಹಿತಯರೊಡನೆ. ಜನಗಳು ಆಗಲೇ ಗುಸು ಗುಸು ಎನ್ನಲಾ ಸಿದರು.

"ನೋಡಿ......ನೋಡಿ ಆ ವೇಶ್ಯಾ ಮಲುಹಣಿ ಹೇಗಿದ್ದಾಳೆ ಮಲುಹಣನನ್ನು ನೋಡಿದ ಆಕೆಯು ಲಜ್ಜೆಯಿಂದ ಹೊರಗೆ, ಕಚ್ಚುತ್ತಾ ಓರೆಗಣ್ಣಿನಲ್ಲೇ ನೋಡಿಕೊಂಡು ಹೊರಟಳು. ಸ್ವಲ್ಪ ಅವರು ಹೋಗುತ್ತಿದ್ದಂತೇ ಇವರು ಕುದುರೆ ಹತ್ತಿ ಹಿಂಬಾಲಿಸಲಾ ಸಿದರು. ಮಲುಹಣಿ ಮನೆಗೆ ಹೋಗಿ ಮಹಡಿಯ ಮೇಲೆ ನಿಧಾನವಾಗಿ ಕುದುರೆಯ ಮೇಲೆ ಹೋಗುತ್ತಿದ್ದ ಮಲುಹಣ ನೋಡತೊಡಗಿದಳು. ಇಬ್ಬರಿಗೂ ನೋಟ ಸ್ಪರ್ಶಗಳಿಂದ ಮನ ದೇಹಕ್ಕೆ ತೃಪ್ತಿ ಸಿಕ್ಕಿತ್ತು.

ಮಲುಹಣೆಯು ಮನೆಯ ಮುಂದಿನ ಉದ್ಯಾನವನದಲ್ಲಿ ಹೂಗಳ ಚೆಲುವನ್ನು ನೋಡಿ ಆನಂದಿಸಿ, ಪಾರಿವಾಳ ಗಿಳಿಗಳೊಡನೆ ಮಾತಾಡುತ್ತಾ, ಆಟವಾಡುತ್ತಾ ಇದ್ದಾಳೆ, ಪದ್ಮಾವತಿಯು ಮನೆಯನ್ನೆಲ್ಲಾ ಸುತ್ತಿ ಮಗಳನ್ನು ಕಾಣದೆ ಹೊರಗೆ ಬಂದು ಮಗಳ ಆಟವನ್ನು ನೋಡಿ ಮನದಲ್ಲೇ ನಗುತ್ತಾ ಹತ್ತಿರಕ್ಕೆ ಬಂದು,

"ಮಲುಹಣೇ....ಮಲುಹಣೇ..." ಎಂದಳು ಮೆಲ್ದನಿಯಲ್ಲಿ. ಯಾರೆಂಬುದು ಅರ್ಥವಾಗದೆ ಕತ್ತು ಹೊರಳಿಸಿ ನೋಡಿದಳು, ಹರ್ಷಚಿತ್ತಳಾದ ಮಲುಹಣೆ ಸಣ್ಣ ದನಿಯಲ್ಲಿ ತಾಯಿಯನ್ನು'ಏನವ್ವಾ' ಎಂದಳು.

"ಇದೇನಪ್ಪಾ ಇಷ್ಟು ದೊಡ್ಡವಳಾಗಿ ಬೆಳೆದು ಇನ್ನೂ ಹುಡುಗಾಟವನ್ನೇ ಬಿಟ್ಟಿಲ್ಲಲ್ಲಾ ?"

"ನಾನು ಹುಡುಗಿ ಅಲ್ದೇ ಮುದ್ಕೀನೇ ಅವ್ವಾ ?" ಮಾತಿನಲ್ಲಿ ಮುಗ್ಧತೆ ತುಂಬಿತ್ತು.

"ನಾನು ನಿನ್ನನ್ನು ರಾಜ ನರ್ತಕಿ ಮಾಡಬೇಕು ಪ್ರವರಸೇನ ಮಹಾರಾಜರ ಆಸ್ಥಾನದಲ್ಲಿ, ಅಂತಿವ್ನಿ...ದೊಡ್ಡವಳಲ್ದೇ ಚಿಕ್ಕವಳೇ ? ಒಳ್ಳೇ ಮಾತೇಳ್ತೀಯಾ...?"

"ನಾನು ಚಿಕ್ಕವಳೇ....ನಾನು ಚಿಕ್ಕವಳೇ, ನಾನು ಗಂಡನಾಗುವವನ ಮುಂದೆ, ಅಲ್ದೇ ಹೋದ್ರೆ ವಿಜಯೇಶ್ವರನ ಮುಂದಲ್ದೇ ಮತ್ತೆಲ್ಲೂ ನರ್ತನ ಮಾಡೋಲ್ಲ"

"ಸಾಕು ಕಣ್ ತಕ್ಕೊ. ಹೇಳಿದಷ್ಟು ಕೇಳು. ಹದಿನಾರು ವರ್ಷ ಆಯ್ತು, ನೆರ್ದು ದೊಡ್ಡವಳಾಗಿದ್ದೀಯೇ, ಇನ್ನೂ ಕೂಸು ಅಂತ ತಿಳ್ಕೊಂಡಿದ್ದೀಯಾ ? ಎದ್ದು ಬಾರೆ ಒಳಕ್ಕೆ....." ಗುಡುಗಿ ತಾನು ಮುಂದಾದಳು. ಮಲುಹಣೆ ಮಾತ್ರ ಚಿಂತಿಸುತ್ತಾ ಅಲ್ಲೇ ನಿಂತಳು. ಪದ್ಮಾವತಿ ತನ್ನ ಜತೆಯಲ್ಲೇ ಬರುತ್ತಿದ್ದಾಳೆ ಎಂದು ಮಾತಾಡುತ್ತಲೇ ಹೋಗುತ್ತಿದ್ದಾಳೆ.

'ಬಾ...ಮನೆ ಒಳಗೆ ಕೂತುಕೊಂಡು ಮಾತಾಡೋಣ, ನಿನ್ನತ್ರ ವಸಿ ಮಾತಾಡೋದಿತ್ತು. ಅದಕ್ಕೆ ಬಂದೆ ಊಂ....ಮನೇನೆಲ್ಲಾ ಶೋಧಿಸ್ಬುಟ್ಟೆ....

ನೀನು ಇಲ್ಲಿದ್ದೀಯೆ?...ನನಗ್ಯಾಗೆ ಗೊತ್ತಾಗಬೇಕು ? ಇದ್ಯಾಕೇ ಯಾವುದ
ಮಾತಾಡ್ದೆ ಬರ್ತ್ತೀದ್ದೀಯೆ...ಊಂ..ಅನ್ನೋಕೂ ಕಷ್ಟವೇ....ಚಿನಾಲಿ..
ಮೋಡ ಗಡಮ ಕಂಡಗ್ಯಾಕಿ ಗತ್ತಾಗಿದ್ದೀ?"

"ಅದಕ್ಕೂ ಮೌನವೇ ಆವರಿಸಲು ಪದ್ಮಾವತಿ ಅಕ್ಕ-ಪಕ್ಕ ಗ
ಸಿದಳು ಯಾರೂ ಇರಲಿಲ್ಲ.

"ಎಲಾ ಇವಳಾ, ಲೇ....ಮಲುಹಣೇ, ಮಲುಹಣೇ..." ಎ
ಸಿಂಹಿಣಿಯಂತೆ ಘರ್ಜಿಸಿದಳು. ತಲೆ ಎತ್ತಿ ನೋಡಿದಳು. ಮಗಳನ್ನು
ಶಿಸಿ...

"ಇದ್ಯಾಕೆ ಬಾ ಅಂದೋದು ಕೇಳಿಸಲಿಲ್ವೇ ? ಅಲ್ಲೇ..ಏನೇ ಮಾ
ಇದ್ದೀಯೆ ನೆಲ ಕೆರೀತಾ?ತಟಪಟನೆ ಎದ್ದು ಬಾರೆ ಬ್ಯಾಗ, ಆಟ ಆಡ್ಬ್ಯಾ

ವಿಧಿಯಿಲ್ಲದೆ ಮಲುಹಣೆ ಆಕೆಯನ್ನು ಹಿಂಬಾಲಿಸಿದಳು. ಹಜಾ
ಮಂಚದ ಮೇಲೆ ಕುಳಿತಳು. ಅದರ ಮುಂದೆ ಉಯ್ಯಾಲೆಯು ಗಾ
ಅಲುಗಾಡುತ್ತಲಿತ್ತು. ಮಲುಹಣೆ ಅದರ ಮೇಲೆ ಕುಳಿತಳು. ಅರಳಿದ ಮು
ದಿಂದ ಪದ್ಮಾವತಿ ಮುಗುಳ್ನಗೆ ಬೀರಿದಳು.

"ಇದ್ಯಾಕವ್ವ ಮಂಕಾಗ್ಬುಟ್ಟೆ...ಚಿಕ್ಕ ಪುಟ್ಟ ಹುಡುಗಿ....ಎಷ್ಟು ಗ
ಗೆಲುವಾಗಿ ಗಿಲಕ್ದಾಗೆ ಇರಬೇಕು...ಈ ಕೋಟಿ ರೂಪೊತ್ಕೊಂಡ್ಬಂದಿ
ನಿಂಗೇನವ್ವ ಕಷ್ಟ....? ನಗು ನಗು..."

" ಅವ್ವಾ....ನಮಗೆ ಮನಸ್ಸೊಪ್ಪಿದವನನ್ನು ತಾನೇ ನಾನು ಮ
ಬೇಕು"

"ಆಗೋಲ್ಲ ಅಂದವ್ರ್ಯಾರವ್ವಾ...ನಿನಗೆ ಇಷ್ಟ ಒಪ್ಪಿದವರನ್ನ..."

"ಆತ ಬಡವನಾದ್ರೂ ಸರಿಯೆ ?"

"ನಾಯಿ ಸಮುದ್ರಕ್ಕೋದ್ರು ನೆಕ್ಕು ನೀರು ಅಂತಾದ್ಬೇಕೇನು ?"

"ಅದಕ್ಕೆ ನೆಕ್ಕುವುದರಲ್ಲೇ ತೃಪ್ತಿ ಸಿಗುವಾಗ ಏಕಾಗಬಾರದು
ಹಾಗಾದರೆ ಸಮುದ್ರದ ನೀರನ್ನೆಲ್ಲ ಕುಡಿ ಅಂತ ಹೇಳ್ತೀಯಾ ?"

"ಇದೇನ್ ಪೆಚ್ ಮಾತಾಡ್ತೀಯವ್ವಾ ?"

"ಇಲ್ಲ ಬಡವನ್ನಕಟ್ಕೊಂಡು ಒದ್ದಾಡು ? ನಂಗೇ ಹೇಳಿದಷ್ಟು ಕೇಳಬೇಕು"

"ಬಂಗಾರ ಇಟ್ಕೊಂಡು ಭಂಗ ಪಡೋದಕ್ಕಿಂತ ಸಂಗಪ್ಪ ಕೊಟ್ಟ ವಿಭೂತಿ ಇಕ್ಕೊಂಡು ಸುಖವಾಗಿರಬಹುದು, ಅಂತ ದೊಡ್ಡವ್ರು ಹೇಳೋದು ನಿಜ. ನಂಗೇನೋ ನಿನ್ನ ಮಾತಿನಲ್ಲಿ ಸಾಮರಸ್ಯ ಕಾಣದು."

"ಬೇಡ ಕಣೆ ನಿನ್ನ ವೇದಾಂತ. ಹೇಳಿದಷ್ಟು ಕೇಳೆ, ವೇದ ಕೇಳೋಕೆ ಬದನೆಕಾಯಿ ತಿನ್ನೋಕೆ ಈ ವಸಂತ ಮಾಸದಲ್ಲಿ ನಿನ್ನ ಗೆಜ್ಜೆ ಪೂಜೆ ನೆರವೇರಲೇ ಬೇಕು. ಅದಕ್ಕೆ ನೀನು ಒಪ್ಪಲೇ ಬೇಕು. ನಾನು ಹೇಳಿದಾಗೆ ನೀನು ಕೇಳಲೇ ಬೇಕು....ಅಲ್ಲದೇ ಹೋದ್ರೆ...."

"ಏನು ಹೇಳ್ಬಿಡವ್ವಾ...ಬಲವಂತ ಮಾಡ್ತೀಯಾ ?"

"ಮಲುಹಣೇ...ನನ್ಯಾಕೆ ಹೊಟ್ಟೆ ಉರಿಸ್ತೀಯಾ ?"

"ಇಲ್ಲ ನನ್ನ ಮಾತು ಸ್ವಲ್ಪ ಕೇಳವ್ವಾ...ಚಿಕ್ಕವಳು ಅಂತ ನನ್ನ ಮಾತು ಕಡೆಗಣಿಸಬೇಡ"

"ನಾನು ಕೇಳೋಲ್ಲ, ದೊಡ್ಡವಳು ನಾನು, ನನ್ನ ಮಾತೇ ನಡೀಬೇಕು. ಹಣ ಯೌವನ ಇರುವವರನ್ನೇ ವರಿಸಬೇಕು. ಈ ಹೆಣ್ಣುಮಕ್ಕಳ್ನ ಒಂದು ಸಟೀಗೆ ಓಡಿಸಿಬಿಟ್ರೆ ಸಾಕು. ಬಲು ನಿಸೂರಾಡ್ತಾರೆ. ತಮ್ಮದೇ ಪ್ರತಿಷ್ಠೆನೇ ನಡೆಸುತ್ತಾರೆ ನಾನು ಕೇಳ್ಬೇಕಲ್ಲಾ ಪದ್ಮಾವತಿ"

"ಆತನನ್ನು ವರಿಸಿ ಹಣ -ಯೌವನ ತೀರಿಹೋದರೆ ಏನು ಮಾಡು ವುದು?"

"ತೀರಿ ಹೋದ ಮೇಲೆ ತಾನೇ ಆ ಮಾತು. ಅವನಿಗಿಂತ ಮಿಗಿಲಾದ ಯೌವನ, ಐಶ್ವರ್ಯ ಇರುವವನು ನಿನ್ನನ್ನೇ ಹುಡೀಕೊಂಡು ಬರ್ತಾನೆ. ಅಷ್ಟೇ"

"ಆತನದೂ ಮುಗಿದ ಮೇಲೆ"

"ಮತ್ತೊಬ್ಬ...ಮಗದೊಬ್ಬ...ನನಗೆ ಕೋಪ ಬರಿಸಬೇಡ ಕಣೇ, ಕಂಗಳಲ್ಲಿ ನೀರು ಬಟ್ಟಲಾಡಿತು. ಅದನ್ನು ನೋಡಿದ ತಾಯಿ,

"ಇದ್ಯಾಕೆ ತಾಯಿ ? ಏನಾದ್ರೂ ಒಂದು ಮಾತು ಅಂದ್ರ ಸಾ ಕಣ್ಣೀರು ಹಾಕಿಕೊಳ್ತೀಯೆ ?"

"ಗೆಜ್ಜೆಪೂಜೆ ಅಂದ್ರೆ ಇದೆಯಾ ಅವ್ವಾ ?"

ಪಟಪಟನೆ ನಾಲ್ಕು ಹನಿ ಕಣ್ಣೀರು ಸುರಿಯಿತು.

"ಹೌದು" ಎಂದಳು ತಾಯಿ ಗಡುಸಿನ ದನಿಯಲ್ಲಿ. ದುಗುಡ ತನ್ನ ಮಾತನ್ನು ಮುಂದುವರಿಸಿದಳು ಮಲುಹಣೆ..

"ಇನ್ನು ಮನುಷ್ಯನಿಗೂ ಪ್ರಾಣಿಗೂ ಇರುವ ವ್ಯತ್ಯಾಸವಾದ ಏನು?"

"ತಲೆಯೆಲ್ಲಾ ಹರಟಬೇಡ ಕಣೆ...ಸುಮ್ನೆ ನಾನು ಹೇಳ್ದಾಗೆ ಗ ಮಾಡು"

"ಇಲ್ಲವ್ವ...ಇದಕ್ಕೆ ನನ್ನ ಸಮ್ಮತಿಯಿಲ್ಲ"

"ಏಕೆ ?"

"ನಾನು ಒಬ್ಬನೇ ಗಂಡನನ್ನು ಮದುವೆಯಾಗಿ ಸಾಯುವವರ ಸುಖವಾಗಿ ಪತಿವ್ರತೆಯಾಗಿ ಸಮಾಜದ ಮಿಕ್ಕ ಜನರಂತೆ ನಡೆದುಕೊ ಬೇಕು."

"ಆತ ಗೊಟಕ್ ಅಂದ್ರೇನು ಮಾಡ್ತೀಯಾ ? ಸುಖ ಒಬ್ಬನಿಂದ ಸಿಗುತ್ತೆ ಅಂತ ತಿಳ್ಕೊಬೇಡ. ಬೇರೆ ಬೇರಯವರಿಂದ ಬೇರೆ ಬೇರೆ ತರಹ ಸುಖ ಸಿಗುತ್ತೆ. ಅದ ಬಿಟ್ಟು ಒಣಗಬೇಡ್ವೇ ಒಬ್ಬನಲ್ಲಿ"

ಹಾಗಾದರೆ ಮಿಕ್ಕವರೆಲ್ಲಾ ಹೇಗಿರುತ್ತಾರೆ ಒಬ್ಬರನ್ನೇ ನಂ ಕೊಂಡು?"

"ನಿನ್ನ ತಲೆಗೆ ಯಾರೇ ಇದೆಲ್ಲಾ ತುಂಬಿದವರು ?"

"ಸಮಾಜವನ್ನು ನೋಡಿ, ನನಗೆ ನಾವು ಏಕೆ ಹಾಗಿರಬಾರ ಅನ್ನಿಸಿತು ?"

'ನಮ್ಮ ಕುಲದ ಪದ್ಧತಿ ನಮಗೆ, ಅವರವರ ಕುಲಪದ್ಧತಿ ಅವರಿಗೆ. ಇದರಲ್ಲಿ ಪಾಪವೇನೂ ಇಲ್ಲ. ವೇಶ್ಯಾ ಪದ್ಧತಿ ಬಹಳ ಪುರಾತನ ಕಾಲ ದಿಂದಲೂ ನಡೆದುಕೊಂಡು ಬಂದಿದೆ."

"ಸೂಳೆಯ ಹೊಟ್ಟೆಯಲ್ಲಿ ಹುಟ್ಟಿದರೂ ಸೂಳೆಯಾಗಿ ಬಾಳುವುದು ನನಗೆ ಕಿಂಚಿತ್ತೂ ಮನಸ್ಸಿಲ್ಲವ್ವಾ. ಎಲ್ಲರೂ ಸೂಳೆ, ವೇಶ್ಯೆ ಎಂದಾಗ ನನಗೆ ದುಃಖ ಉಕ್ಕುತ್ತದೆ"

"ಏನಾದರೂ ನೀನು ಸೂಳೆ ಎಂಬುದನ್ನು ತಪ್ಪಿಸಿಕೊಳ್ಳಲಾಗುವು ದಿಲ್ಲ ಜನರಿಂದ"

"ಅನ್ನಲಿ ಬಿಡು, ನಾವೂ ದೈಹಿಕ, ಮಾನಸಿಕ ಸುಖಪಟ್ರೆ ಸಾಕುಬಿಡು"

"ಆದರೆ ನಾನು ಪಾತಿವ್ರತ್ಯ ಸಾಧಿಸಿ ಆದರ್ಶಗಳಾಗಬೇಕೆಂಬುದೇ ನನ್ನ ಆಸೆ" ದುಗುಡ ಹೆಚ್ಚಿ ಕಣ್ಣೀರು ಕೆನ್ನೆಯ ಮೇಲೆ ಝೀಲಂ ನದಿ ಬೇಸಿಗೆಯಲ್ಲಿ ಹರಿವಂತೆ, ಈಕೆಯ ಮನದ ದುಃಖವೆಂಬ ಮಂಜು ಕರಗಿ ನೀರಾಗಿ ಹರಿಯಲಾರಂಭಿಸಿತು.

"ಮಲುಹಣೀ ಹೆಚ್ಚಿಗೆ ಮಾತಾಡಲಿಕ್ಕೆ ನನಗಿಷ್ಟವಿಲ್ಲ. ಈಗ ಮೊದಲು ನಿನ್ನ ರಂಗ ನೃತ್ಯ ವಿಜಯೇಶ್ವರನ ದೇವಾಲಯದಲ್ಲಿ ಆಗ ಬೇಕು. ಅದಕ್ಕೆ ನಿನ್ನ ಸಮ್ಮತಿ ಕೊಡಲೇಬೇಕು. ಆಗ ಅನೇಕ ಬಲ್ಲಿದರ ಕಣ್ಣಿಗೆ ಬಿದ್ದು ನಿನ್ನುದ್ದ ಹೊನ್ನು ಸುರಿವವರು ಬರುತ್ತಾರೆ"

"ಅವ್ವಾ...ನೀನೂ ಇಷ್ಟೆಲ್ಲಾ ಮಾಡುವುದಕ್ಕಿಂತ ಕತ್ತಿಯಿಂದ ಇರಿದು ಬಿಡು, ಆಗ ನಿನ್ನ ಮನಸ್ಸಿಗೂ ನೆಮ್ಮದಿ ನನ್ನ ಮನಸ್ಸಿಗೂ ಶಾಂತಿ ಯಾತ್ತದೆ. ಇಂದೊಬ್ಬ ಪುರುಷ, ನಾಳೆಯೊಬ್ಬ ಪುರುಷನೆಂದು ಪ್ರಾಣಿಯಂತೆ ಅರಸಿ ಕೊಂಡು ಹೋಗುವುದಕ್ಕೆ ನನಗೆ ಖಂಡಿತಾ ಇಷ್ಟವಿಲ.'ಪ್ರಪಂಚದಲ್ಲಿ ಜೀವಿ ಸುವುದಕ್ಕೋಸ್ಕರ ಬಾಳುವುದರ್ಲಿ ಅರ್ಥವಿಲ್ಲ' ಮನಸ್ಸು ಮನಸ್ಸು ಬೆರೆತು ವರಿಸಬೇಕು. ಕಡ್ಡಾಯದಿಂದ ಮಾಡುವ ಕೆಲಸ ಮನಸ್ಸಿಗೆ ಅಶಾಂತಿ ತರು ವುದು. ಹಣಕ್ಕಾಗಿಯೇ ನನ್ನನ್ನು ಹೆತ್ತಿದ್ದರೆ ನಿನಗೆ ಬೇಕಾದಷ್ಟು ಹಣಕ್ಕೆ

ನನ್ನನ್ನು ಮಾರಿಬಿಡು. ಆಗಲಾದರೂ ಒಬ್ಬನ ಕೈ ಹಿಡಿದು ಹೇಗೋ ಬ
ಸುತ್ತೇನೆ."

"ಬಲು ಮಾತು ಕಲಿತೆ ಕಣೆ, ಬಲಿತ ಮೇಲೆ ಆರು ಹತ್ತ
ಈಗ್ಹಿತ್ತವಳು ಬಟ್ಟಿಕ್ಕಕ್ಕೇ ಬಂಧ್ಯಂತೆ. ನಮ್ಮ ಅವ್ವದಿರು ಹೀಗುತ್ರ ಕೊ
ಅಲ್ಲೇ ಅಪ್ಪಚ್ಚಿ ಮಾಡಿಬಿಡ್ತಿದ್ರು. ನಾವೆಲ್ಲಾ ಹೇಳಿದಾಗ ಕೇಳ್ಳೋ
ಬರ್ನಿಲ್ವಾ ?"

"ಅವ್ವಾ ನನ್ನ ಮನಸ್ಸಿನ ವೇದನೆಯನ್ನು ಎಷ್ಟು ಅಂತ
ಅರ್ಥ ಮಾಡಿಕೋ. ನನಗೆ ಶಾಸ್ತ್ರೋಕ್ತವಾಗಿ ಮದುವೆ ಮಾಡಿಸು. ಆಗ
ಸಂತೋಷವಾಗಿ ಸಮಾಜದಲ್ಲಿ ಮಾನವಳಾಗಿ ಬಾಳ್ತೇನೆ"

"ಪೇಚಾಡಬೇಡ ಸುಮ್ನೆ. ನಿನ್ಗೆ ಮಾಡೋದೆ ನನ್ನ ಮ
ಬಂದಂತೆ" ಎಂದು ಹೊರಟಳು.

ಮನಸ್ಸು ತೂಗುಯ್ಯಾಲೆಯಾಡಿತು ಮಲುಹಣೆಗೆ.

"ಮದುವೆ, ಗೆಜ್ಜೆಪೂಜೆ. ಯಾವ ಜನ್ಮದ ಪ್ರಾಯಶ್ಚಿತ್ತಕ್ಕೋ
ಸೂಳೆತನ. ಇಲ್ಲ ನಾನು ಖಂಡಿತ ಗೆಜ್ಜೆಪೂಜೆಗೆ ಒಪ್ಪುವುದಿಲ್ಲ. ನಾ
ಮದುವೆಯನ್ನು ಆಗಿ ಆದರ್ಶ ಸತಿಯಾಗಿ ಬಾಳಬೇಕು. ಬದುಕಿನಲ್ಲಿ ಬಂ
ಕಾಣಬೇಕು. ಜನರು ನನ್ನನ್ನು ಸೂಳೆ ಎನ್ನಬಾರದು. ನಾನು ಮದುವೆ ಆ
ಆಗುತ್ತೇನೆ. ಗೆಜ್ಜೆಪೂಜೆ ಆದರೂ ಒಬ್ಬನನ್ನೇ ವರಿಸಿ ನನ್ನ ಸಂಕಲ್ಪ
ಸಾಧಿಸುತ್ತೇನೆ"

ಮತ್ತೆ ತಾಯಿಯಾಡಿದ ಮಾತುಗಳು ತಲೆ ತುಂಬಾ ಸುಳಿದಾಡಿ
ಉಯ್ಯಾಲೆಯಿಂದ ಕೆಳಗಿಳಿದು ತನ್ನ ಮಹಡಿಯ ಕೋಣೆಗೆ ಓಡಿ ಮ
ನಿಂತಳು. ಉಯ್ಯಾಲೆ ಗಾಳಿಗೆ ಚಂಚಲವಾಗಿ ತೂಗಾಡಿತು. ಕೇಶರಾಶಿ ಬ
ಗಾಳಿಗೆ ಹಾರಿದವು, ಕಂಗಳಲ್ಲಿ ನೀರು ಉದುರಿತು. ಬಾಗಿಲನ್ನು ಜೋ
ನೂಕಿ ಒಳಗೆ ನುಗ್ಗಿದಳು. ಗಾಳಿಯು ಬರ್ರನೆ ಬೀಸಿ ಕಿವಿಯನ್ನು ಮುಚ್ಚಿ
ವಷ್ಟು ಬೇಸರ ತಂದಿತು. ಪರದೆಗಳು ಒದರಲಾರಂಭಿಸಿದವು. ಕೂಡ
ಬಾಗಿಲನ್ನು ಭದ್ರಪಡಿಸಿ ನಿಂತಳು. ತನ್ನ ಕೋಣೆಯೆಲ್ಲಾ ತಿರುಗಿದಂತಾಯಿ
ಕೈಯಿ ದ್ರಾಕ್ಷಾರಸವಿದ್ದ ಹೂಜಿಗೆ ಯಾಂತ್ರಿಕವಾಗಿ ಹೋಗಿ ಲೋ

ಬಗ್ಗಿಸಿಕೊಂಡು ಹೀರಿದಳು. ಮತ್ತೆ ಹಾಕಿಕೊಂಡು ಗಂಟಲತನಕ ಕುಡಿದು ಅಮಲೇರಿದಂತಾಗಿ ಹಾಸಿಗೆಯ ಮೇಲೊರಗಿದಳು. ಕೋಣೆಯು ಮತ್ತಷ್ಟು ಜೋರಾಗಿ ತಿರುಗಿದಂತಾಯಿತು. ಮನಸ್ಸು ಮತ್ತೆ ಹೊಸ ಯೋಚನೆಗಳೆಡೆಗೆ ಕೊಟ್ಟಿತು. ಸ್ವಲ್ಪ ಹೊತ್ತಾಗುತ್ತಿದ್ದಂತೆ ಅಮಲು ಇಳಿದು ಬೆವೆತಳು. ಮುಖ ವನ್ನು ಶ್ರುವಾಲಿನಿಂದ ಒರೆಸಿಕೊಂಡು ದುಃಖ ಎಲ್ಲೆ ಮೀರಿತು. ನಾನಾ ವಿಧವಾಗಿ ಆಕೆಯ ಮನಸ್ಸು ಉಲಿಯಿತು.

ಸಮಾಜ

ಸೂಳೆ...

ಗರತಿ.....

"ಗೆಜ್ಜೆಪೂಜೆ"

ಮದುವೆ......

ಹಿಂದೂ ಸಂಸ್ಕೃತಿಯ ಕೊಡಲಿ ಸೂಳೆತನ. ಸೂಳೆಯನ್ನು ಸಮಾಜ ಸೃಷ್ಟಿಸಿಲ್ಲ. ಸಮಾಜದಲ್ಲಿ ಸೂಳೆಯರು ಹುಟ್ಟಿಕೊಂಡರು. ಏನು ವೈಚಿತ್ರ್ಯ?"

"ಗಂಡಸು ಎಷ್ಟು ಜನ ಹೆಂಗಸರನ್ನು ರಮಿಸಿದರೂ, ಸೂಳೆತನ ಮಾಡಿದರೂ ಸರಿ ಆತನಿಗೆ ಸಮಾಜದಲ್ಲಿ ಸ್ಥಾನ. ಅದೇ ಹೆಣ್ಣು ಪರ ಪುರುಷನನ್ನು ಕಣ್ಣೆತ್ತಿ ನೋಡಿದರೆ ಸಾಕು. ಆಕೆ ಅಪವಿತ್ರೆ, ಜಾರಿಣಿ, ವೇಶ್ಯೆ, ಸೂಳೆ, ಎನ್ನುತ್ತಾರೆ. ಎಂಥ ವಿಚಿತ್ರ ಜಗತ್ತು? ಅತನನ್ನು ಏಕೆ ಸಮಾಜದಲ್ಲಿ ಕೀಳೆನ್ನಬಾರದು ? ಆತನು ಏಕೆ ಸರಿಯಾಗಿ ನಡೆದುಕೊಳ್ಳಬಾರದು.?"

"ಇಲ್ಲ ಸಮಾಜದಲ್ಲಿ ಗಂಡಸು ಏಕಪತ್ನೀವ್ರತಸ್ಥನಾಗಿಬರಬೇಕು. ಹೆಣ್ಣು ಪತಿವ್ರತೆಯಾಗಿರಬೇಕು. ಇದು ಸರಿಯಾದ ಶಾಸ್ತ್ರ. ಅದನ್ನು ಪಾಲಿಸ ಲಾರದ ಕಿಚ್ಚಿಗೆ ಗಂಡಸರು ತುಚ್ಛ ಕೆಲಸಕ್ಕಿಳಿದರೂ ಕ್ಷಮೆ ದೊರೆಯಿತು. ಹೆಣ್ಣಿಗೆ ವೇಶ್ಯೆಯಾ ಪಟ್ಟವಾಯಿತು. ಎಲ್ಲರಿಗೂ ಏಕ ಒಂದಾಗಿರಬಾರದು ? ಇಬ್ಬರೂ ಆದರ್ಶರಾಗಿ ಏಕೆ ಬಾಳ ಬಾರದು ? ನಾನು ಸೂಳೆಯ ಹೊಟ್ಟೆ ಯಲ್ಲಿ ಹುಟ್ಟಿ, ಸೂಳೆಮಗಳು ಎನಿಸಿಕೊಂಡರೂ, ನನ್ನ ಮಕ್ಕಳಾಗಲೀ ನನ್ನ ಮುಂದಿನ ಪೀಳಿಗೆಯಾಗಲೀ ಸೂಳೆಯ ವಂಶ ಎನ್ನುವ ಬೇರನ್ನು ಕಿತ್ತು

ಹಾಕುತ್ತೇನೆ. ಗರತಿಯಾಗಿ ಬಾಳುತ್ತೇನೆ. ಇದು ಶತಸಿದ್ಧ. ವಿಜಯೇಶ್ವರನ ಮೇಲಾಣೆ. ನಾನಾ ವಿಧವಾಗಿ ಹಂಬಲಿಸಿ ಹಾಗೆಯೇ ಮಂಚದ ಮೇಲುರು ಳಿದಳು ಮಲುಹಣೆ.

***********

ಮಲುಹಣನು ತನ್ನ ಕೋಣೆಯಲ್ಲಿ ಗಡ್ಡದ ಮೇಲೆ ಕೈ ಹೊತ್ತು ಕುಳಿತಿದ್ದಾನೆ. ಮಗನ ಯೋಗಕ್ಷೇಮವನ್ನು ವಿಚಾರಿಸಲು ಬಂದರು ತಂದೆ. ಮಗನು ಬೇಸರದಲ್ಲಿರುವುದನ್ನು ಅರಿತರು. ತಂದೆಯವರು ಬಂದುದೂ ತಿಳಿಯದೆ ಆಳವಾದ ಯೋಚನೆಯಲ್ಲಿದ್ದ ಮೆಲ್ಲನೆ ಕೆಮ್ಮುತ್ತಾ ಮಗನ ಹತ್ತಿರ ಬಂದು

"ಮಗೂ ಮಲುಹಣಾ.." ಎಂದರು ಸವಿದನಿಯಲ್ಲಿ.

"ಬನ್ನಿ ಅಪ್ಪಾಜಿ..." ಎಂದು ಪೀಠವನ್ನು ತೋರಿಸಿ ನೆಟ್ಟಗೆ ಕುಳಿತು ಕೊಂಡನು. ತಂದೆಯು ಹಾಗೆಯೇ ಕುಳಿತಿದ್ದ ಮಗನನ್ನುದ್ದೇಶಿಸಿ.

"ಏಕೆ ಮಗು ಈ ಹೊತ್ತು ಒಂದು ತರಹವಾಗಿದ್ದೀಯೆ ? ಮನರಂ ಜನೆ, ಸಂಗೀತ ಹಿಡಿಸಲಿಲ್ಲವೇ? ಹೇಳು ಸಂಕೋಚಪಡಬೇಡ"

"ಏನೂ ಇಲ್ಲ ಅಪ್ಪಾಜಿ...ಸ್ವಲ್ಪ ಬೇಸರವಾಯಿತು. ಅದಕ್ಕೇ ಹಾಗೆ ಕುಳಿತೆ ಏನೂ ಬೇಡಿ"

"ಅಂದಹಾಗೆ ಈ ಹೊತ್ತು "ಮಲುಹಣೇಶ್ವರ" ದೇವಾಲಯದ ಉದ್ಘಾಟನೆಯು ಪ್ರವರಸೇನ ಮಹಾರಾಜರಿಂದ. ಪ್ರೀತಿಯ ಮಗನಾದ ನಿನ್ನ ನೆನಪಿಗೆ ನಿನ್ನ ಹೆಸರಿನ ಶಿವಾಲಯವೊಂದನ್ನು ಕಟ್ಟಿಸಿದೆ, ಸಾಯಂಕಾಲ ದೇವಾಲಯದ ಅಂಗಳದಲ್ಲಿ ಕೇರಳದ ನೃತ್ಯಗಾರ್ತಿಯವರಿಂದ ಕಥಕ್ಕಳಿ ನೃತ್ಯವಿದೆ. ನಿನಗೆ ಬೇಸರ ಕಳೆಯುವುದು. ಬೇಗಬೇಗ ಸಿದ್ಧನಾಗಿಬಿಡು" ಎಂದರು ಸಂತಸದ ದನಿಯಲ್ಲಿ.

"ಆಗಲಿ ಅಪ್ಪಾಜಿ" ಮಾರುತ್ತರವಿತ್ತ.

ಮಾತು ಮುಗಿಯಿತೆಂದು ಮಗ ತಿಳಿದಿದ್ದ. ಆದರೆ ಅದು ಮತ್ತೆ ಬೆಳೆಯಲಾರಂಭಿಸಿತು.

"ಮಲುಹಣಾ..ಬೇಸರವಾಗಿದ್ದೀಯೆ. ಸಾಮಾನ್ಯವಾಗಿ ತಾರುಣ್ಯದಲ್ಲಿ ಬರುವುದು ಸಹಜವೇ ಅದಕ್ಕೆ ಮದ್ದು ಮದುವೆ. ಅದನ್ನು ಇಷ್ಟರಲ್ಲೇ ನೆರವೇರಿಸಬೇಕೆಂಬ ಆಸೆ ನನ್ನದು. ಆದರೆ ನಿನ್ನದು.?"

"ಹಾಗೇನೂ ಇಲ್ಲ ಅಪ್ಪಾಜಿ ನನಗೀಗ ಅವಸರವಿಲ್ಲ"

"ನಾನು ಬೇರೆ ಬೇರೆ ದೇಶಗಳಿಂದ ತರಿಸಿದ್ದ ಕನ್ಯೆಯರ ಭಾವ ಚಿತ್ರಗಳನ್ನು ನೋಡಿದೆಯಾ ? ಯಾವುದನ್ನೂ ವೈಯಕ್ತಿಕವಾಗಿ ನೋಡ ಬೇಕು ಎಂದು ಹೇಳಿದರೆ ನೋಡಿಕೊಂಡು ಬರಬಹುದಲ್ಲ. ಸುಮ್ಮನೆ ಕಾಲವನ್ನು ನೂಕುತ್ತಾ ಹೋಗುವುದರಿಂದ ಏನು ಪ್ರಯೋಜನವಿಲ್ಲ"

"ಈಗ ನಾನು ಅದರ ಕುರಿತು ಯಾವ ತೀರ್ಮಾನಕ್ಕೂ ಬಂದಿಲ್ಲವಲ್ಲ ಅಪ್ಪಾಜಿ"

" ಈ ಕಾರ್ಯ ನಾನಿರುವಾಗಲೇ ನಡೆಯಬೇಕಲ್ಲವೇ ಮಗು ?"

"ಅದು ನಿಜ ಆದರೆ ಈ ವಿಷಯದಲ್ಲಿ ಆತುರ ಬೀಳುವುದು ಬೇಡಿ. ನಾನು ನಿಮಗೆ ನನ್ನ ಮನದಾಕಾಂಕ್ಷೆಯನ್ನು ತಿಳಿಸುತ್ತೇನೆ ಇಷ್ಟರಲ್ಲೇ"

"ಆಗಲಿ ಮಗೂ ನಿಧಾನವಾಗಿಯೇ ತಿಳಿಸಿ ಆದರೆ ಹೆಚ್ಚು ದಿನಗಳನ್ನು ತೆಗೆದುಕೊಳ್ಳಬೇಡ" ಎಂದು ಹೋಗುತ್ತಿದ್ದು, ಮತ್ತೆ ಹಿಂತಿರುಗಿ.

"ಸಾಯಂಕಾಲಕ್ಕೆ ಬೇಗ ಸಿದ್ಧವಾಗುವುದನ್ನು ಮರೆಯಬೇಡ ಮಗೂ"

"ಆಗಲಿ ಅಪ್ಪಾಜಿ.." ಎಂದು ತಂದೆಯ ಪ್ರೀತಿಗೆ ಮಣಿದ. ಮತ್ತೆ ಯೋಚನೆಗೆ ತೊಡಗಿದ.

"ತನ್ನ ಮನದ ಬಯಕೆಯನ್ನು ಹೇಗೆ ತಿಳಿಸುವುದು? ಅದಕ್ಕೆ ಅವರು ಒಪ್ಪುತ್ತಾರೆಯೇ ಏನು? ಎಂಬುದಾಗಿ ನಾನಾ ವಿಧವಾಗಿ ಹಂಬಲಿಸಿದ. ಉತ್ತರ ದೊರೆಯದೆ ಚಿಂತಾಕ್ರಾಂತನಾದ.

ಸಾಯಂಕಾಲದ ಹೊತ್ತಿಗೆ ಹೊಸದಾಗಿ ನಿರ್ಮಿಸಿದ ಮಲುಹಣೇಶ್ವ ದೇವಾಲಯವು ತಳಿರು ತೋರಣಗಳಿಂದ ಅಲಂಕೃತವಾಗಿತ್ತು. ಊ ಜನರೆಲ್ಲ ನೆರೆದು ಪ್ರವರಸೇನ ಮಹಾರಾಜರ ಬರುವಿಕೆಗಾಗಿ ಕಾದಿದ್ದ ದೇವಾಲಯವು ಲಕ್ಷ ದೀಪಗಳಿಂದ ಅಲಂಕೃತವಾಗಿ ತಮ್ಮಟೆ, ಜಾಗಟೆ ನಾದದಿಂದ ಇಂಬುಗೊಟ್ಟಿತ್ತು. ಸ್ವಲ್ಪ ಹೊತ್ತಿನಲ್ಲೇ ಮಹಾರಾಜರ ರಥ ಬಂದಿತು. ಹಾರ್ದಿಕ ಸ್ವಾಗತಗಳೊಂದಿಗೆ ದೇವಾಲಯವನ್ನು ಪ್ರದಕ್ಷಿ ಉದ್ಘಾಟನಾ ಸಮಾರಂಭವನ್ನು ನೆರವೇರಿಸಿರು. ಜನರು ಸುವರ್ಣಭ ಧರ್ಮವನ್ನು ಕುರಿತುಹೊಗಳಿದರು. ಸಮಾರಂಭವಾದ ಮೇಲೆ ಮ ಣೇಶ್ವರನ ಪೂಜೆಗೆ ಮಹಾಪ್ರಭುಗಳನ್ನು ವೇದ ಮಂತ್ರ ಘೋಷಣೆಗಳ ದಿಗೆ ಕರೆದುಕೊಂಡು ಬಂದರು.

ಪೂಜೆ ಸಾಂಗವಾಗಿ ನಡೆಯಿತು. ನೃತ್ಯ ಮಂಟಪದಲ್ಲಿ ಜನರ ಕಣ್ಣ ತಣಿಸುವ ಕೇರಳ ನೃತ್ಯಗಾರ್ತಿಯರಿಂದ ಕಥಕ್ಕಳಿ ನೃತ್ಯವಾರಂಭವಾಯಿ ಊರ ಜನರು, ಮಹಾ ಪ್ರಭುಗಳು ನೋಡಿ ಆನಂದಪಟ್ಟರು. ಪ್ರವರಸೇ ಮಹಾ ಪ್ರಭುಗಳು ಸ್ವಲ್ಪ ಸುವರ್ಣ ವರಹಗಳನ್ನಿತ್ತು ಹೊರಟರು.

ಮಲುಹಣ ಆತನ ಮಿತ್ರರು ಈ ವಿಜೃಂಭಣೆಯ ಕಾಲದಲ್ಲಿ ಭಾಗ ಹಿಸಿದರು. ಮಲುಹಣನಿಗೆ ಬೇಸರ ಕಳೆದು ಮನಸ್ಸಿಗೆ ಆನಂದವಾಯಿತು. ಭ ಪೂರ್ವಕವಾಗಿ ಎಲ್ಲರೂ ಮಲುಹಣೇಶ್ವರನಿಗೆ ನಮಿಸಿದರು. ಮ ಣೇಶ್ವರನು ಶಾಂತವಾಗಿ ಆಶೀರ್ವದಿಸುವಂತೆ ಕಂಡ.



ಮಲುಹಣ ದೇವನು ದೇವಾಲಯದಿಂದ ಬಂದು ಬಟ್ಟೆಗಳ ಕಳೆದು ತನ್ನ ಕೋಣೆಯಲ್ಲಿ ಒತ್ತಟ್ಟಿ ಇಟ್ಟನು. ದೇಹದ ಆಲಸ್ಯದಿ ಆಕಳಿಸುತ್ತಾ ಮೈ ಮುರಿದನು. ಕೈ ಮೇಜಿನ ಮೇಲಿದ್ದ ಕನ್ನಡಿಗೆ ತುಸು ಒಡೆಯಿತು. ಅದನ್ನು ನೋಡಿ..

"ಇಂದು ಮಂಗಳವಾರ, ಕನ್ನಡಿ ಒಡೆಯಬಾರದು. ಇದಾವ ಅನಿಷ್ಟ ಮುಂದೆ ಕಾದಿದೆಯೋ, ಇಂದು ಒಡೆದಿರುವುದನ್ನು ನೋಡಿದರೆ, ಯೋರೋ ಬಾಯಿಲೆ ಬೀಳುವುದು ಖಚಿತ ಎಂದುಕೊಂಡ. ಆದದ್ದಾಯ್ತು ಮಾಡುವುದಾದರೂ ಏನು ? ಎಂದು ಹೊರಗಡೆ ಬಂದ. ಕೇಶವಭಟ್ಟರು ಈತನನ್ನೇ ಕರೆಯಲಿಕ್ಕೆ ಬರುತ್ತಿದ್ದರು. ಹತ್ತಿರ ಬಂದು..

"ಬನ್ನಿ..ಊಟ ಸಿದ್ಧವಾಗಿದೆ" ಎಂದ.

"ಆಗಲಿ ಬರುತ್ತೇನೆ. ನನ್ನ ಕೋಣೆಯಲ್ಲಿ ಕನ್ನಡಿ ಒಡೆದು ಚೂರಾಗಿದೆ. ಚೆನ್ನಾಗಿ ಗುಡಿಸುವಂತೆ ಯಾರಾದರೂ ಆಳಿದ್ದರೆ ಹೇಳಿ"

"ಅದನ್ನು ಮಾಡಿಸುತ್ತೇನೆ. ನೀವು ಊಟಕ್ಕೆ ಅಲ್ಲಿಗೇ ಬರುತ್ತೀರೋ ಅಥವಾ ಇಲ್ಲಿಗೇ ತರಲೋ"

"ಇಲ್ಲ ತಂದೆಯ ಕೂಡ ಮಾಡಬೇಕು"

"ಸರಿ ಬನ್ನಿ" ಎಂದು ಹೊರಟಯ ಮಲುಹಣನು ಕೆಳಗಿಳಿದು ಭೋಜನ ಗೃಹದತ್ತ ಬರುತ್ತಿರಲು ಸುವರ್ಣ ಭಟ್ಟರು ಬಂದರು. ಅಂದಿನ ದಿನ ಮುಖದಲ್ಲಿ ಕಾಂತಿ ರಂಜಿಸುತ್ತಿತ್ತು. ಆಗಲೂ ಮಲುಹಣನಿಗೆ ಅನುಮಾನ.

"ತಂದೆ ಏಕೆ ಇಷ್ಟೊಂದು ಚೆನ್ನಾಗಿ ಕಾಣುತ್ತಿದ್ದಾರೆ" ಎಂದುಕೊಂಡ. ತನ್ನ ಮನಸ್ಸಿನಲ್ಲೇ, ತಂದೆ ಮಗನನ್ನು ನೋಡಿ...

"ಇದೇನು ಮಲುಹಣ ಇಂದು ನೀನೂ ಭೋಜನ ಗೃಹಕ್ಕೆ ಬಂದೆ"

"ನಿಮ್ಮ ಜತೆಯಲ್ಲೇ ನಾನೂ ಊಟ ಮಾಡಬೇಕು ಎನ್ನಿಸಿತು"

"ಬಹಳ ಸಂತೋಷ...ಬಾ...ಮಗೂ.."

ಜತೆಯಲ್ಲೇ ಕುಳಿತು ಊಟ ಮುಗಿಸಿದರು. ಊಟ ಮಾಡಿ ಮಗನು ಹೋಗುತ್ತಿದ್ದುದನ್ನು ನೋಡಿ ಸುವರ್ಣಭಟ್ಟರು..

"ಕೇಶವಭಟ್ಟರೇ..ಮಲುಹಣನಿಗೆ ಹಾಲು-ಹಣ್ಣು ಸಿದ್ಧಮಾಡಿಬಿಡಿ"

"ಆಗಲಿ ಸ್ವಾಮಿ" ತಲೆದೂಗಿದ.

ಮಲುಹಣನು ತನ್ನ ಕೋಣೆಗೆ ಹೋದ. ಅಷ್ಟು ಹೊತ್ತಿಗಾಗಲೇ ಕೋಣೆಯು ಸ್ವಚ್ಛಾಗಿತ್ತು. ಕನ್ನಡಿ ಚೂರುಗಳು ಹೊರಗೆ ಹೋಗಿದ್ದುವ ಮಂಚದ ಮೇಲೆ ಹಾಗೆಯೇ ಒರಗಿದ. ಅಷ್ಟರಲ್ಲೇ ಕೇಶವಭಟ್ಟರು ಹಾ ಹಣ್ಣು ತಂದಿಟ್ಟರು. ಅದನ್ನು ಸೇವಿಸಿದ, ಆಮೇಲೆ ಮಲಗಿದ. ನಿದ್ದೆ ಬರಲಿ ಮಹಾಭಾರತ ಪಾರಾಯಣ ಮಾಡಿದ ಸ್ವಲ್ಪ ಹೊತ್ತು. ಬೇಸರವಾಯಿತು ಹಾಗೆಯೇ ಮುಚ್ಚಿಟ್ಟು ದೀಪ ಕಡಿಮೆ ಮಾಡಿದ. ಮಲುಹಣನು ಸರಿಯಾ ನಿದ್ದೆ ಮಾಡಿ ಎಷ್ಟೋ ದಿನಗಳಾಗಿತ್ತು. ಎಷ್ಟು ಮರೆತು ಮಲಗಿದರೂ ಬಂ ಕಲಕಿ ಕಣ್ಣು ರೆಪ್ಪೆಗಳನ್ನು ಮೇಲೆ ಮಾಡುತ್ತಿದ್ದಳು.

"ಎಂಥ ಮುಗ್ಧೆ ? ವೇಶ್ಯೆಯಾದರೂ ಆಕಯಲ್ಲಿ ಆ ಸ್ವಭಾ ಸ್ವಲ್ಪವೂ ಇಲ್ಲವೇ ಇಲ್ಲ. ರಾಜನರ್ತಕಿಯಾಗುವುದನ್ನು ಒಪ್ಪಿಕೊ ಲಿಲ್ಲವಂತೆ ? ವಿಜಯೇಶ್ವರನ ಮುಂದಲ್ಲದೆ ಬೇರೆ ಎಲ್ಲೂ ನೃ ಮಾಡುವುದಿಲ್ಲವಂತೆ. ಎಂಥ ಸಂಕಲ್ಪ ಆಕೆಯ ಕೈ ಹಿಡಿಯಲು ಪು ಮಾಡಿರಬೇಕಲ್ಲವೇ ? ಇಂಥವಳನ್ನು ತಂದೆ ಬೇಡ ಎನ್ನುತ್ತಾರೆಯೇ ಯಾವ ಗುಣವಿದ್ದರೇನು? ಅದನ್ನು ಹೇಗೆ ಗುರ್ತಿಸುತ್ತಾರೆ? ತಂದೆಯ ಕೇಳಿದರೆ ಬೇಡ ಎನ್ನುವುದಿಲ್ಲ. ನಿನ್ನಿಷ್ಟ ಎಂದರೆ? ಖಂಡಿತ ಸಾಧ್ಯವಿ ವಿಜೃಂಭಣೆಯಿಂದ ವೈಭವ ಪೂರ್ಣ ಮದುವೆ ಮಾಡಬೇಕೆಂದಿರುವ

ಈ ಸೂಳೆಯ ಗೆಜ್ಜೆ ಪೂಜೆ ಮಾಡಿಕೋ ಎನ್ನುತ್ತಾರೆಯೇ ಇಲ್ಲದಿದ್ದರೆ ನನ್ನ ಮನಸ್ಸು ನೆಮ್ಮದಿ ಹೊಂದಲಾರದು. ಅದಕ್ಕೇನು ಮಾ ಲಿ ? ರಂಪ ಮಾಡಿದರೆ ಒಪ್ಪಬಹುದೇ ? ಮನೆಬಿಟ್ಟು ಹೊರಡು ಎನ್ನು ರೆಯೇ ? ಛೀ..ಅವರ ಕರುಳು ಹೆಂಗರಳು, ಮಗನ ಸುಖವೇ ಅ ಸುಖವಾಗಿರುವಾಗ, ನನಗೊಪ್ಪಿಗೆಯಾದ ಹೆಣ್ಣನ್ನು ಏಕೆ ಮದುವೆ ಮಾ ಕೊಳ್ಳಬೇಡ ಎನ್ನುವರು? ಕೇಳಿಯೇ ಬಿಡುತ್ತೇನೆ. ಖಂಡಿತ ಒಪ್ಪುತ್ತಾ ಸಂತಸ ಮೊಗದಿಂದ ಬಂದ. ತನ್ನ ಕೋಣೆಯನ್ನು ಬಿಟ್ಟು, ತಂದೆಯ ಕೋಣೆ ಓಡಿಬಂದ. ಹೇಳಲೋ ಬೇಡವೋ ಎಂದು ಮನಸ್ಸು ಏಕತದಂತೆ ಏ

ಯಿತು. ಕೊನೆಗೆ ಧೃಡ ನಿಶ್ಚಯವನ್ನು ಮಾಡಿ ಕೇಳಿಯೇ ಬಿಡುತ್ತೇನೆ ಎಂದು ಹುಮ್ಮಸ್ಸಿನ ಹೆಜ್ಜ ಇಟ್ಟು..

"ಅಪ್ಪಾಜಿ....ಅಪ್ಪಾಜೀ..."

ದೂರದಿಂದ ಮಗನ ಶಬ್ದವನ್ನು ಆಲಿಸಿದ ತಂದೆ ಮೇಲೆದ್ದು ಕುಳಿತು ಕೊಳ್ಳುವ ಪ್ರಯತ್ನದಲ್ಲಿದ್ದರು. ನಡುಗುವ ದನಿಯಲ್ಲಿ ಅಲ್ಲಿಂದಲೇ..

"ಬಾ ಮಗೂ...ಬಾ.." ಎಂದರು.

ಹೊಸಲಿಗೆ ಬಂದು ನಿಂತ.. ನಡುಗುವ ತಂದಯನ್ನು ನೋಡಿ ಸಂತೋಷ ಏರಿದ್ದುದು ಸಂಪೂರ್ಣ ಇಳಿಯಿತು ಪಾತಾಳಕ್ಕೆ. ಏನೋ ಸಂತಸದ ಸುದ್ದಿಯನ್ನು ಹೇಳಬೇಕೆಂದಿದ್ದ ಮಲುಹಣನು ಮೂಕ ನಾದನು.

ಸಂತೋಷ ದುಃಖವಾಗಿ ಮಾರ್ಪಟ್ಟಿತು. ದುಮ್ಮಾನದಿಂದ..

"ಅಪ್ಪಾಜಿ..." ಎಂದ.

ತಂದೆಯವರು ಮಗನ ಮೊದಲ ಸಂತಸದ ದನಿ ಹೀಗೆ ಕುಗ್ಗಲು ಕಾರಣವೇನೆಂದು ತಿಳಿಯಲು ಪ್ರಶ್ನಿಸಿದರು.

"ಏನು ಮಲುಹಣಾ ? ಏನೋ ಹೇಳಬೇಕೆಂದು ಸಂತೋಷವಾಗಿ ಬಂದೆ. ಆದರೆ ಏಕೆ ಹಾಗೆಯೇ ನಿಂತುಬಿಟ್ಟೆ"

"ಹ್ಞಂ... ಏನೂ ಇಲ್ಲ. ಅಪ್ಪಾಜಿ. ತಾವು ನಡುಗುವುದನ್ನು ನೋಡಿದರೆ ನನಗೆ ಗಾಬರಿಯಾಗುತ್ತದೆ ?"

"ಖಾಯಿಲೆ...ಏನು ? ಚಳಿ, ವಯಸ್ಸಾಯಿತು..ನಡುಕ...ಮನುಷ್ಯ ನಿಗಲ್ಲದೆ ಮತ್ತಾರಿಗೆ ಬರಬೇಕು ಖಾಯಿಲೆ ?"

"ಅಪ್ಪಾಜೀ" ಎಂದು ಓಡಿಬಂದು ತಂದೆಯನ್ನು ತಬ್ಬಿಕೊಂಡು ಸಣ್ಣ ಮಗುವಿನಂತೆ ರೋದಿಲಾರಂಭಿಸಿದನು. ತಂದೆಯವರು ಸಮಾಧಾನಿಸುತ್ತಾ...

"ಏನೂ ಭಯಪಡಬೇಡ ಮಗೂ...ಏನು ಮಲುಹಣಾ.." ಎಂದು ತಲೆಯನ್ನು ನೇವರಿಸಲಾರಂಭಿಸಿದರು. ಕೈಗಳಲ್ಲಿ ಅಸಾಧ್ಯ ಶಾಖವಿತ್ತು. ವಿಪರೀತ ಜ್ವರಕ್ಕೆ ತಿರುಗಿದೆ ತಂದೆಗೆ ಎಂದು ದುಃಖಿಸಿದ ಮಲುಹಣ.

❋❋❋❋❋❋❋

ಎರಡು ಮೂರು ದಿನಗಳು ಕಳೆದಿರಬೇಕು. ಅಂದು ಹುಟ್ಟು ಒಂದು ಮಾರು ಬಂದಿದೆ. ಮಹಡಿಯ ಮೇಲಿಂದ ಕೆಳಗಿಳಿಯುತ್ತಾ ಬರುತ್ತಿರಲು ಮೆಲ್ಲ ಮೆಲ್ಲನೆ ನರಳುವ ದನಿ ಬಂತು. ಕಿವಿಗೊಟ್ಟು ಆಲಿಸಿ ತಂದೆಯ ಕೋಣೆಯಿಂದಲೇ ಬರು ಎಂದು ಊಹಿಸಿದ. "ತಂದೆಯವರು ಎರಡು ಮೂರು ದಿನ ಗಳಿಂ ಒಂದು ತರಹವಿದ್ದು ಚಳಿಚಳಿ ಎನ್ನುತ್ತಿದ್ದರು. ಅವರ ಮೈಗೆ ಸ್ವಸ್ಥ ಎಂದು ಖಚಿತ ಮಾಡಿಕೊಂಡು ಅವರ ಕೋಣೆಯತ್ತ ಬಂದು ಬಾಗಿಲು ಸರಿಸಿದ.

"ಹ್ಹಾ......ಹ್ಹಾಂ....ಅಯ್ಯೋ..ಶಿವಶಿವಾ...ವಿಜಯೇಶ್ವರ..ಮ ಣಾ..ಎಂದು ಹ್ಹೂಂ ಗುಟ್ಟುತ್ತಾ ನರಳುತ್ತಿದ್ದರು. ಮಲುಹಣ ಹತ್ತಿರ ತಂದೆ ಕಣ್ಬಿಟ್ಟು ಪೇಚಿನಲ್ಲಿ ಸಿಕ್ಕಿ ಬಿದ್ದುದನ್ನು ನೋಡಿ -

"ಅಪ್ಪಾಜೀ....ಅಪ್ಪಾಜೀ..' ಎಂದು ಮೆಲ್ಲನೆ ಅವರ ಹಣೆಯ ಕೈಯಿಟ್ಟು ನೋಡಿದ. ಎಳ್ಳು ಹಾಕಿದರೆ ಸಿಡಿಯುವಷ್ಟು ಬಿಸಿ, ಜ್ವರದಿಂದ ನರಳುತ್ತಿದ್ದಾರೆ ಎಂಬುದು ವ್ಯಕ್ತವಾಯಿತು ಮಗನು ಹಣೆಯ ಮುಟ್ಟುತ್ತಿದ್ದಂತೆಯೇ ಸುವರ್ಣ ಭಟ್ಟರು...

"ಏನು ಮಲುಹಣಾ..ಏನೋ ಚಳಿ ಜ್ವರ ಬಂದಿದೆ. ಅಷ್ಟೇ, ಅದ ಗಾಬರಿ ಪಡುತ್ತಿರುವೆ?"

ಎನ್ನುವಷ್ಟರಲ್ಲಿ ಕೇಶವಭಟ್ಟರು ಇನ್ನೂ ಸುವರ್ಣಭಟ್ಟರು ಎದ್ದಿಲ್ಲ. ಸ್ನಾನಕ್ಕೆ ಬರಲಿಲ್ಲ ನೋಡೋಣ ಎಂಬ ಮನಸ್ಸಿನಿಂದ ಬ ಬಾಗಿಲ ಹತ್ತಿರ ನಿಂತು ಯಜಮಾನರು ನರಳುವುದನ್ನು, ಮಲುಹಣ ಪಕ್ಕದಲ್ಲಿದ್ದುದನ್ನು ಗಮನಿಸಿದ. ಮಲು ಹಣನು ತಂದೆಯನ್ನು ಕುರಿತು.

"ನಾನು ಹೋಗಿ ಫಕೀರಪ್ಪ ಹಕೀಮನನ್ನು ಕರದುಕೊಂಡು ಬ ಬಿಡುತ್ತೇನೆ ಅಪ್ಪಾಜಿ"

ಮಗನ ಭಯವನ್ನು ನೋಡಿ ಶುಷ್ಕ ನಗುವಿನಿಂದ..

"ನನಗೇನೂ ಆಗಿಲ್ಲಲ. ಕಷಾಯ ಕುಡಿದರೆ ಸರಿಹೋಗುತ್ತದೆ. ಹಕೀಮರನ್ನು ಕರೆತರುವ ಅವಶ್ಯಕತೆಯಿಲ್ಲ" ಎಂದರೂ ಮಲುಹಣ

"ನೀವು ಸಮಾಧಾನ ಚಿತ್ತರಾಗಿ ಮಲಗಿ" ಎಂದು ಹೇಳಿ ಹೊರಟೇ ಬಿಟ್ಟ. ಕುದುರೆ ಹತ್ತಿ ಮಂಜು ಮಲೆಗಳನ್ನು ದಾಟುತ್ತಾ ಹಕೀಮರ ಮನೆ ಯತ್ತ ಧಾವಿಸಿದ. ಪ್ರಕೃತಿಯಲ್ಲಿ ಏನೋ ಒಂದು ರೀತಿಯ ವಿಕಾರತೆ ಎದ್ದು ಕಾಣುತ್ತಿತ್ತು. ಜೋರಾಗಿ ಕುದುರೆಯನ್ನು ಓಡಿಸಿದ ದಾರಿಯಲ್ಲಿ ಹೋಗುತ್ತಾ ಆತನ ಮನಸ್ಸು ಯೋಚಿಸಿತು..

"ನಾನು ರಾತ್ರಿ ಕಂಡ ಕನಸು, ಹಲ್ಲುಗಳು ಬಿದ್ದುದು, ವಿಜಯೇಶ್ವರನ ಪೂಜೆ, ಅಲ್ಲದೆ ಕನ್ನಡಿ ಬೇರೆ ಒಡೆದಿತ್ತು. ನಮ್ಮ ತಂದೆಯನ್ನು ಖಾಯಿಲೆ ಯಿಂದ ಕೆಡವಿತ್ತು. ಹೇಗಾದರೂ ಮಾಡಿ ಆಗಲಿ ಬೇಗನೆ ಅವರಿಗೆ ಗುಣ ವಾದರೆ ಸಾಕು ವಿಜಯೇಶ್ವರಾ " ಎಂದ ಮನದಲ್ಲೇ ವಂದಿಸಿದ.

ಸ್ವಲ್ಪ ಹೊತ್ತಿನಲ್ಲಿಯೇ ಹಕೀಮರ ಮನೆಯನ್ನು ತಲುಪಿದ. ಹಕೀಮ ಫಕೀರಪ್ಪ ನವರು ಆಗತಾನೇ ಮದ್ದು ಶೇಖರಣೆಗೆ ಬೇರೆ ಊರಿನ ಕಡೆ ಹೋಗುವುದರಲ್ಲಿದ್ದರು. ಮಲುಹಣನನ್ನು ನೋಡಿ ಅವರು..

"ಏನು ಬಂದ್ರೀ ಮಲುಹಣದೇವರು ?" ಎಂದರು.

"ಹಕೀಮರೇ, ನಮ್ಮ ತಂದೆಯವರು ಉಗ್ರ ಜ್ವರದಲ್ಲಿ ನರಳುತ್ತಿ ದ್ದಾರೆ. ನೀವು ಬೇಗ ಬಂದು ಏನಾದರೂ ಮಾಡಿ ಮದ್ದು ಕೊಡಬೇಕು. ಬೇಗ ಏಳಿ...ಹೋಗೋಣ' ದುಮ್ಮಾನದ ದನಿಯಲ್ಲುಲಿದ.

"ಆಗಲೀ..ಹುಜೂರ್...ಬಂದುಬಿಟ್ಟೆ"

"ಹಾಗಂದ್ರಾಗೋಲ್ಲ ನನ್ನ ಜತೆಯಲ್ಲೇ ಬರಬೇಕು"

"ಆಗಬಹುದು ಸ್ವಾಮಿ" ಎಂದು ಎಲ್ಲವನ್ನು ತೆಗೆದುಕೊಂಡು ಹೊರಟರು.

ಅತ್ತ ಕೇಶವಭಟ್ಟರು ಸುವರ್ಣಭಟ್ಟರಿಗೆ ಹಣೆಗೆ ತಣ್ಣೀರಿನ ಬಟ್ಟೆ ಯನ್ನು ಹಾಕಿದ್ದರು. ಹಕೀಮರು ಅದನ್ನು ತೆಗೆದು ಹಣೆ ಮುಟ್ಟಿ.."ಏನು ಜ್ವರ ಇದೆ?" ಎಂದು ತಮ್ಮ ಮೂಲಿಕೆಯ ಮದ್ದನ್ನು ತೆಗೆದು,

"ಮಲುಹಣ ದೇವರೇ ಇದರ ರಸವನ್ನು ಮೂರು ಹೊತ್ತು
ನಾಳೆ ಬಂದು ನೋಡುತ್ತೇನೆ.

ಎಂದು ಹೇಳಿ ಹೊರಟರು. ಮಲುಹಣನು ರಾತ್ರಿ ಮೂರು
ಕುಡಿಸಿದ. ತಂದೆಯವರು ನರಳುತ್ತಿದ್ದರೇ ಹೊರತು ಗೆಲುವಾಗಿ
ನಾಡಲೂ ಆಗುತ್ತಿರಲಿಲ್ಲ. ಬೆಳಿಗ್ಗೆಯಾದರೂ ಜ್ವರ ಸ್ವಲ್ಪವೂ
ಇಲ್ಲ. ಮತ್ತಷ್ಟು ಏರತೊಡಗಿತು. ಮಲುಹಣನಿಗೆ ನಿನ್ನೆ ಇದ್ದ
ಇಂದಿಲ್ಲ. ನಿನ್ನೆ ಇದ್ದ ನೆಮ್ಮದಿ ಇಂದು ಇರಲಿಲ್ಲ. ಜ್ವರವು ಹೆಚ್ಚಾಗಿ
ಅವರು ಮಗನನ್ನು ಕುರಿತು

"ಏನು ಮಲುಹಣಾ, ನನಗೇನಾಗಿದೆ ಎಂದು ನಿದ್ರೆಗೆಡುತ್ತಿ
ನಾಳೆ ದಿನ ನಾನು ಎದ್ದು ಓಡಾಡಿಬಿಡುತ್ತೇನೆ, ಹೋಗಿ ಮಲಗಿಕೋ.
ಭಟ್ಟರು ನನ್ನ ಹತ್ತಿರ ಇರುತ್ತಾರೆ"

ಅವರು ಹೇಳುವುದು ಬರೇ ಬಂಡ ಮಾತು ಎಂದು
ಇಳಿದುಕೊಂಡನು. ಮತ್ತೆ ಹಕೀಮರು ಬಂದರು, ಮಲುಹಣನ ಕ
ನೀರು ತೊಟ್ಟಿಕ್ಕಿತು. ಅದನ್ನು ನೋಡಿದ ಹಕೀಮ ಫಕೀರಪ್ಪನವರು.

'ಏಕೆ ಮಲುಹಣ ದೇವರು ಕಣ್ಣಾಳಲ್ಲಿ ನೀರು ಹಾಕಿಕೊ
ಇದ್ದೀರಿ ?"

"ಯಾವಾಗ ಬಂದಿರಿ ಫಕೀರಪ್ಪ ?"

"ಇದೀಗ ಬಂದೆ. ಏನೂ ಆಗೋಲ್ಲ ಸುಮ್ಮನಿರಿ"

"ಇನ್ನೇನು ಹಕೀಮರೇ, ಔಷಧ ಕೊಟ್ಟಮೇಲೂ ಜ್ವರ ಇ
ಮತ್ತಷ್ಟು ಏರ್‍ತಾ ಇದೆ. ಇದೇನು ವಿಚಿತ್ರ ?"

"ಅಧು ಇಳಿಯಬೇಕಾದ್ರೆ ಏರಲೇಬೇಕು. ಈ ಹೊತ್ತು ಚೆನ್ನಾಗಿ
ಮದ್ದು ಕೊಡುತ್ತೇನೆ. ಅದನ್ನು ಕೊಡಿ ನಾಳೆಗೆ ಜಪ್ಪನೆ ಇಳಿದುಬಿಡುತ್ತೆ

"ಅಷ್ಟು ಮಾಡಿದರೆ ಬಹಳ ಉಪಕಾರ ಮಾಡಿದಂತಾಗುತ್ತದೆ

ಅಂದೂ ಸಹ ಹಕೀಮರು ಉತ್ತಮ ಮದ್ದನ್ನು ಕೊಟ್ಟು ಹೊ
ಮಲುಹಣನು ನಾನಾ ಚಿಂತೆಯಲ್ಲಿ ತೊಡಗಿದ.

"ನಮ್ಮ ತಂದೆಯವರು ಅಷ್ಟೊಂದು ಚೆನ್ನಾಗಿ ಕಂಡ್ರು ನನಗೆ. ಅದ್ಕೇ ಅವರಿಗೆ ಖಾಯಿಲೆ ಬಂತೋ ಏನೋ ?" ಎಂದದು ಮತ್ತೆ ಮೂಲಿಕೆಯ ರಸವನ್ನು ಕುಡಿಸಿ ಮಲಗಿಸಿದ. ನಾಳೆಗಾದರೂ ತಂದೆಗೆ ಸರಿಯಾಗಬಹುದೆಂದು ಸುಮ್ಮನಾಗಿ ಸಮಾಧಾನ ಹೊಂದಿದ. ಆದರೆ ಮರು ದಿನ ಮತ್ತಷ್ಟು ಹೆಚ್ಚಿತ್ತು. ಹಕೀಮರಂತೂ ದಿನವೂ ಬಂದು ಔಷಧಿಯನ್ನು ಕೊಟ್ಟು, ಇಂದಲ್ಲ ನಾಳೆ ಸರಿಹೋಗಬಹುದೆಂದು ಹೇಳಿ ಹೋಗು ತ್ತಿದ್ದರು. ಆದರೆ ಇಂದು ಕಹಿ ಧ್ವನಿಯಲ್ಲಿ..

"ಮಲುಹಣಾ...ನಾನು ಕಲಿತ ವಿದ್ಯೆಯನ್ನೆಲ್ಲಾ ಉಪಯೋಗಿಸಿದ. ಆದರೆ ಇದು ಬಗೆಹರಿಯುವ ಮಟ್ಟಿಗೆ ತೋರದು" ಎಂದು ಹೊರಟರು. ಮಲುಹಣನಿಗೆ ಕೈ ಕಾಲುಗಳೇ ಬಿದ್ದುಹೋದಂತಾದವು. ಯಾವ ಕೆಲಸ ಮಾಡಲೂ ಕೈ ಬರದೇ ಹೋದವು. ತಂದೆಯ ಹಿತ ಚಿಂತನೆಯಲ್ಲೇ ಕೃಶನಾದ. ತಾನಿನ್ನು ಬದುಕಲಾರೆ ಎಂಬುದನ್ನು ಸುವರ್ಣ ಭಟ್ಟರು ಖಚಿತ ಮಾಡಿಕೊಂಡರು. ವಿಜಯೇಶ್ವರನ ಪೂಜೆ ಸಲ್ಲಿಸಿ ಪ್ರಸಾದವನ್ನು ತಂದೆಗೆ ನೀಡುವುದಕ್ಕೆ ಪ್ರವೇಶಿಸಿ. ನರಳಾಟ ಹೆಚ್ಚಾಗಿತ್ತು. ಬೆಚ್ಚುತ್ತಾ ಮಲುಹಣನು......

"ಅಪ್ಪಾಜೀ ಏನಾಯ್ತು ? ಏಕೆ ಹೀಗೆ ಹೊರಳಾಡುತ್ತಾ ಇದ್ದೀರಿ ? ಸರಿಯಾಗಿ ಮಲಗಿಕೊಳ್ಳಿ. ಇನ್ನೊಂದು ಕಂಬಳಿಯನ್ನು ಹೊದ್ದಿಸಲೇ ?"

ಅಷ್ಟು ಹೊತ್ತಿಗೆ ಧ್ವನಿಯು ತೊದಲಿಗೆ ಸಿಕ್ಕಿತ್ತು.

"ಮಗನೇ, ಒಂದೇ ಬಾರಿಗೆ ನನ್ನನ್ನು ಹೊದ್ದಿಸಿ ಮಲಗಿಸುವ ಸಮಯ ಬಂದಿದೆ. ಮಲುಹಣದೇವಾ.... ಬಂದಿದೆ.."

ಅಷ್ಟು ದಿನ ತಂದೆಯವರು ಸಮಾಧಾನಿಸುತ್ತಿದ್ದವರೇ ಹೀಗೆಂದ ಮೇಲೆ ಮತ್ತಷ್ಟು ಕುಸಿದ ಮಲುಹಣ.

"ಅಪ್ಪಾಜೀ....ನೀವು ಹೇಳುತ್ತಿರುವುದು ನನಗೆ ಭಯ ಭೀತಿಗಳನ್ನು ತರುತ್ತಿವೆ."

"ಅಷ್ಟು ದಿನಗಳಿಂದಲೂ ಪರಿಹಾರವಾಗಬಹುದೆಂದು ತಿಳಿದುಕೊಂಡಿದ್ದೆ, ಆದರೆ ಇದು ಅರಿಯುವ ರೋಗವಲ್ಲ. ನನಗೀ ಉಗ್ರತಾಪ

ಅರಿಯಲಿಲ್ಲ. ನಾನಿನ್ನು ಬದುಕುವಂತಯೂ ತೋರುವುದಿಲ್ಲ. ನನ್ನ ಯ
ನೆಯನ್ನು ನೀನು ಹಚ್ಚಿಕೊಳ್ಳಬೇಡ ಮಗು. ನೆಮ್ಮದಿಯಿಂದಿರು"

"ಅಪ್ಪಾಜೀ...ಹಾಗೆಲ್ಲಾ ಅನ್ಬೇಡಿ, ಹಾಗಂದು ನನ್ನ ಹೊಟ್ಟೆಗೆ
ಯನ್ನು ಸುರಿಯಬೇಡಿ"

"ಹೌದು..ಮಗು..ಹೌದು, ಇದು ಖಂಡಿತ ಸತ್ಯ, ನನ್ನ ಕೊ
ಆಸೆಯೊಂದಿದೆ ಅದನ್ನು ನಡೆಸಿಕೊಡುತ್ತೀಯಾ ?"

"ಅದೇನು ಹೇಳಿ ಅಪ್ಪಾಜಿ ? ನಿಮ್ಮ ಮಗನಾದ ನಾನು ಅ
ಮಾಡದಿದ್ದರೆ ಏನು ಪ್ರಯೋಜನ ?"

"ಮಗೂ ನನ್ನ ಮಿತ್ರರೂ ಈ ಊರ ಮಹಾ ಪ್ರಭುಗಳೂ
ಪ್ರವರಸೇನ ಮಹಾರಾಜರಲ್ಲಿ ಈ ವಿಷಯ ಹೇಳಿ ಕೊನೆಯದಾಗಿ ಅ
ನೋಡಬೇಕು ಎಂಬ ಆಸೆಯನ್ನು ತಿಳಿಸು. ಅವರು ಬಂದ ಬೇಗ ಕ
ಕೊಂಡು ಬಾ. ಕಣ್ತುಂಬ ಪ್ರಾಣಮಿತ್ರನನ್ನು ನೋಡಿ ಕಣ್ಮುಚ್ಚುತ್ತೇನೆ"

"ಈಗಲೇ ಹೋಗಿ ಜತೆಯಲ್ಲೇ ಕರೆದುಕೊಂಡು ಬರುತ್ತೇನೆ.
ಏನೂ ಯೋಚಿಸಬೇಡಿ, ನಿಮಗೇನೂ ಆಗುವುದಿಲ್ಲ. ದೇವರಿದ್ದಾನೆ"

ಎಂದು ಸಮಾಧಾನದ ಮಾತಾಡಿ ಹೋಗಲಿದ್ದ. ಕೇಶವಭ
ಮುಂದಿರಲು ಅವರನ್ನು ಕುರಿತು..

"ಭಟ್ಟರೇ ತಂದೆಯ ಕಡೆ ಜೋಪಾನವಾಗಿ ನೋಡಿಕೊಳ್ಳ
ನಾನು ಬೇಗ ಬಂದುಬಿಡುತ್ತೇವೆ"

"ಆಗಲೀ..ಮಲುಹಣದೇವರೇ.."

ಎಂದು ಅವರ ಹತ್ತಿರ ಹೋಗಿ ಕುಳಿತರು. ಧಣಿಯನ್ನು ನ
ಅವರ ಆಳ ಹೃದಯಕ್ಕೆ ನಮಿಸಿ, ಅವರ ಸೇವೆ ಮುಗಿಯುವುದೋ ಏ
ಎಂಬ ದುಃಖಕ್ಕೀಡಾದರು. ಹಾಲನ್ನು ತಂದು ಕುಡಿಸಲು ಸುವರ್ಣಭ

"ಏಕೆ ಭಟ್ಟರೇ ಸುಮ್ಮನೇ ಹತ್ತಕ್ಕೆ ಹೊಯ್ದಂತೆ ನನಗೆ ಹಾ
ಹೊಯ್ಯುತ್ತಿದ್ದೀರಿ. ಇದರಿಂದ ಏನೂ ಪ್ರಯೋಜನವಿಲ್ಲ ಬಿಡಿ"

"ಹಾಗೆನ್ನಬಾರದು ಸ್ವಾಮಿ..ಕುಡಿಯಿರಿ" ಎಂದು ಪೀಡಿಸಿ ಹಾಲನ್ನು ಕುಡಿಸಿದರು.

ನೇರವಾಗಿ ಮಲುಹಣನು ಪ್ರವರಸೇನ ಮಹಾರಾಜರ ಅರಮನೆಗೆ ಕುದುರೆಯಮೇಲೆ ಹೊರಟು ತೀವ್ರವಾಗಿ ಅರಮನೆಯನ್ನು ಸೇರಿದ, ಪ್ರಭುಗಳು ಆಗತಾನೇ ಭೋಜನ ಮುಗಿಸಿ ತಮ್ಮ ವಿಶ್ರಾಂತಿ ಗೃಹದಲ್ಲಿ ಕುಳಿತಿದ್ದರು. ಸೇವಕರು ಮಲುಹಣನು ಬಂದಿರುವುದನ್ನು ತಿಳಿಸಲು ಮಹಾಪ್ರಭುಗಳು ಆತನನ್ನು ಒಳಗೆ ಕರೆಸಿಕೊಂಡರು.

"ಏನು ಬಂದೆ ಮಲುಹಣಾ ?" ಎಂದರು ಅಚ್ಚರಿಯಲ್ಲಿ.

"ಪ್ರಭೂ, ತಂದೆಯವರಿಗೆ ವಿಪರೀತ ಜ್ವರ, ನಿಮ್ಮನ್ನು ನೋಡಬೇಕೆಂದು ಚಡಪಡಿಸುತ್ತಿದ್ದಾರೆ" ಎಂದ ದುಗುಡದ ದನಿಯಲ್ಲಿ.

"ಹ್ಹಾಂ..ಸುವರ್ಣಭಟ್ಟರಿಗೆ ಇದೇನು ಬಂತು ? ವಿಷ ಘಳಿಗೆ...ಏಕೆ.. ಏಕೆ...ಕಣ್ಣೀರು ಹಾಕಿಕೊಳ್ಳುತ್ತೀಯಾ ? ಏನೂ ಆಗುವುದಿಲ್ಲ ಸುಮ್ಮನಿರು ಮಲುಹಣಾ ...ವಿಜಯೇಶ್ವರ ಇದ್ದಾನೆ. ಕಾಪಾಡುತ್ತಾನೆ, ನಾನು ಈಗಲೇ ಬಂದುಬಿಡುತ್ತೇನೆ"

ಎಂದು ಹೊರಡಲು ಅನುವಾದರು. ಕುದುರೆಯನ್ನು ಅಲ್ಲೇ ಬಿಟ್ಟು ಮಹಾ ಪ್ರಭುಗಳ ಜತೆ ರಥದಲ್ಲಿ ಮಲುಹಣನೂ ಹೊರಟ.

ಆಗಲೇ ವಿಷಯವು ಊರಿಗೆಲ್ಲಾ ತಿಳಿದು ಎಲ್ಲರೂ ನೋಡಿಕೊಂಡು ಹೋಗುತ್ತಿದ್ದಾರೆ. ರಥದಿಂದಿಳಿ ಮಹಾ ಪ್ರಭುಗಳನ್ನು ನೋಡಿದ ಕೇಶವ ಭಟ್ಟರು ಓಡಿಹೋಗಿ ವಿಷಯವನ್ನು ಸುವರ್ಣಭಟ್ಟರಿಗೆ ತಿಳಿಸಿದರು.

ಹೂಂ..ಗುಟ್ಟುತ್ತಿದ್ದುದನ್ನು ನಿಲ್ಲಿಸಿ..

"ಕರೆದುಕೊಂಡು ಬನ್ನಿ" ಎಂದರು.

ತಮ್ಮ ಕಡೆಗೆ ಬರುತ್ತಿದ್ದ ಪ್ರವರಸೇನ ಮಹಾರಾಜರನ್ನು ನೋಡಿ ಸುವರ್ಣ ಭಟ್ಟರು ಮೇಲೇಳುವುದಕ್ಕ ಪ್ರಯತ್ನಿಸಿ ಸಾಧ್ಯವಾಗದೆ ಉರುಳಲು ಮಹಾಪ್ರಭುಗಳು,

"ಸುವರ್ಣಭಟ್ಟರೇ...ಮೆಲ್ಲಗೆ...ಮೆಲ್ಲಗೆ.." –

"ಬನ್ನಿ ಮಹಾಪ್ರಭು...ಶರಣು...ಶರಣಾರ್ತಿ, ಮಹಾ ಪ್ರಭು ಸತ್ಕರಿಸುವ ಕಾಲ ನನಗಿನ್ನು ಮುಗಿಯಿತು ಬನ್ನಿ ಕುಳಿತುಕೊಳ್ಳಿ" ಪೀಠವನ್ನು ತೋರಿಸಿದರು. ಮಹಾ ಪ್ರಭುಗಳು ಕುಳಿತರು. ಮಲುಹ ಮತ್ತೊಂದೆಡೆ ಕೈ ಕಟ್ಟಿ ನಿಂತಿದ್ದನು. ಪ್ರಭುಗಳು ಸುವರ್ಣಭಟ್ಟರನ್ನು

"ಯೋಚಿಸಬೇಡ ಸುವರ್ಣಭಟ್ಟ, ಹಲವನ್ನು ಹಂಬಲಿಸ ಸ್ವಲ್ಪ ಚೇತರಿಸಿಕೋ"

ಕೇಶವಭಟ್ಟರು ತ್ವರೆಯಗಿ ದ್ರಾಕ್ಷಾರಸವನ್ನು ತಂದಿಟ್ಟರು. ಪ್ರ ಬೇಡ ಹಿಂದಕ್ಕೆ ತೆಗೆದುಕೊಂಡು ಹೋಗುವಂತೆ ಸನ್ನೆ ಮಾಡಲು ಭಟ್ಟರು ಹಿಂದಕ್ಕೆ ತೆಗೆದುಕೊಳ್ಳುತ್ತಿರಲು..

"ಸ್ವಲ್ಪ ಹಾಲನ್ನಾದರೂ ತಂದುಕೊಡಿ" ಎಂದರು ಸುವರ್ಣ ಕೂಡಲೇ ಹಾಲನ್ನು ಭಟ್ಟರು ತಂದಿಟ್ಟರು. ಆದರೆ ಪ್ರಭುಗಳು ಕುಡಿ ಅದು ಹಾಗೇ ಆರಿತು. ಸುವರ್ಣಭಟ್ಟರು

"ಮಹಾಪ್ರಭುಗಳೇ ಹಾಲು ಆರಿತು"

"ಸುವರ್ಣಭಟ್ಟಾ...ನನಗೆ ಎಲ್ಲವೂ ಆಗಿದೆ ಯೋಚಿಸಬೇಡ"

ದೀನ ದನಿಯಲ್ಲಿ ಸುವರ್ಣಭಟ್ಟರು..

"ನನ್ನ ಆಸೆ ಆಕಾಂಕ್ಷೆಗಳೆಲ್ಲಾ ಮುಗಿಯಿತು, ಮಹಾಪ್ರಭು"

"ಹೌದು..ಏನು ಮಾಡಲಿಕ್ಕಾಗುತ್ತದೆ ? ಕುಬೇರನಂತಿರುವ ದಾಸರಿಗೆ, ಬಂಟರಿಗೆ, ಸಹಸ್ರ ಸಂಖ್ಯೆಯ ಹಣವನ್ನು ದಾನವಿತ್ತ. ನ ಳಿಗೆ ಲಕ್ಷ ಸಂಖ್ಯೆಯ ಹಣವನ್ನು ಕೊಟ್ಟೆ, ನಿನ್ನನ್ನು ನಂಬಿಕೊಂಡು. ದವರಿಗೆ ಕೋಟಿ ಸಂಖ್ಯೆಯ ಧನವನ್ನು ದಾನ ನೀಡಿದೆ. ಶಿಷ್ಯ ಲೆಕ್ಕವಿಲ್ಲದಷ್ಟು ಕೊಟ್ಟೆ. ಅನೇಕ ಛತ್ರಗಳು, ಕೆರೆಗಳು, ಅರವಟ್ಟ ಅಗ್ರಹಾರಗಳು. ಶಿವಾಲಯಗಳನ್ನೂ ನಿರ್ಮಿಸಿದೆ. ಅಲ್ಲದೆ ಒಬ್ಬನೇ ಸಕಲ ವೇದಶಾಸ್ತ್ರಗಳಿಂದ ವೈಭವವಾಗಿ ಉಪನಯನವನ್ನು

ಆತನಿಗೋಸ್ಕರ ದಿವ್ಯ ವಸ್ತ್ರಗಳು, ಗಂಧ ಕಸ್ತೂರಿ, ಹೊಸ ಭೂಷಣಗಳು, ಗೀತ ವಾದ್ಯ, ನೃತ್ಯ ಲೀಲೆ, ಆತನ ಮುಂದೆ ಸರಸೋಕ್ತಿ, ನವರಸಗಳು, ನವ ಹಣ್ಣುಗಳು, ಹೊಸ ವಾಹನ, ನೂತನ ರತ್ನಗಳನ್ನು ಕೊಟ್ಟು ಕಣ್ತುಂಬ ನೋಡಿಕೊಂಡು ಆತನ ವ್ಯಾಮೋಹದಲ್ಲೇ ನಲಿಯುತ್ತಾ ಆತನ ಸುಖಕ್ಕೆ ಮಾಡಿದುದನ್ನು ನಾನು ಬಲ್ಲೆ. ಅಲ್ಲದೆ ಅಂದು ಹೇಳಿದಂತೆ ಆತನ ವ್ಯಾಮೋಹ ದಿಂದ ಚಿಂತಿಸುತ್ತಾ ನಿತ್ಯವೂ ಒಂದು ಸಹಸ್ರ ಹೊನ್ನು ವೆಚ್ಚ ಮಾಡಿದರೂ ಎಂದಿಗೂ ಆತನಿಗೆ ಕೊರತಾಯಾಗಬಾರದೆಂದು ಮೂರು ಕೋಟಿ ಅರವತ್ತು ಲಕ್ಷ ಹೊನ್ನು ತೆಗೆದಿಟ್ಟದ್ದೀನಿ ಎಂದು ಹೇಳಿದೆ."

"ಆದರೂ ಸಮಾಧಾನವಿಲ್ಲ ಪ್ರಭು. ಆತ ಮದುವೆ ಮಾಡಿ ಕಣ್ತುಂಬ ನೋಡ ಬೇಕೆಂದಿದ್ದೆ....ಆದರೆ"

ದುಗುಡ ಎಲ್ಲೆ ಮೀರಿತು. ಕಣ್ಣುಗಡ್ಡೆಯಲ್ಲಿ ಅಂಚುಗಟ್ಟಿದ ಕಣ್ಣೀರು ಹೆಚ್ಚಿ ಸರಸರನೆ ಕೆನ್ನೆಯ ಮೇಲೆ ಹರಿಯತೊಡಗಿತು. ಝೀಲಂ ನದಿಯಂತೆ.

"ಏನು ಮಾಡುವುದು....? ಅಳಬೇಡ..ಸ್ವಲ್ಪ ಸಮಾಧಾನ ತಂದುಕೋ"

"ಮಹಾಪ್ರಭು, ನಾನಿನ್ನು ಇಹವನ್ನು ತ್ಯಜಿಸಿ ಪರಲೋಕ ಸೇರುವುದರಲ್ಲಿ ಅನುಮಾನವಿಲ್ಲ"

"ಹಾಗನ್ನಬಾರದು ಸುವರ್ಣಭಟ್ಟ" ಮಹಾಪ್ರಭುಗಳು ಸಮಾ ಧಾನದ ನುಡಿ ಆಡಿದರು.

"ನನ್ನ ಕಾಲ ಮುಗಿಯಿತು.ಇನ್ನು ನನ್ನ ಮಗನ ಕಾಲ. ಆತ ಸುಖ ದಿಂದ ಇದ್ದರೆ ಸಾಕು."

"ಆತನು ಒಳ್ಳೆಯ ಮಾರ್ಗವನ್ನು ಹಿಡಿದರೆ ಸರಿ, ಇಲ್ಲದಿದ್ದರೆ ಎಲ್ಲವೂ ಅಶಾಶ್ವತ. ಸಾವಿರ ಹೊನ್ನಿದ್ದರೂ ಸಂಜೆಗೇ ಲಯ' ಎಂಬಂತೆ ಆಗುವುದು"

"ಏನೋ ಶಿವನಿಗೆ ಗೊತ್ತು"

"ಹಂಬಲಿಸುವುದರಿಂದ ಏನೂ ಪ್ರಯೋಜನವಿಲ್ಲ. ಸ್ವಲ್ಪ ಧಾನದಿಂದ ವಿಶ್ರಮಿಸಿಕೋ , ಅವರವರು ಬಾಳುವ ಚರ್ಯೆ ಗೊತ್ತು. ನೀನು ಪುಣ್ಯ ಕೆಲಸ ಮಾಡಿರುವುದರಿಂದ ಆತನಿಗೆ ಒಳ್ಳೆ ಆಗುತ್ತದೆ" ಎಂಬ ಆಶ್ವಾಸನೆಯನ್ನಿತ್ತರು ಪ್ರಭುಗಳು.

ತೊದಲುವ ದನಿಯಲ್ಲೇ ತಮ್ಮ ಮಾತನ್ನು ಸುವರ್ಣಭ ಮುಂದುವರಿಸಿ.

"ಮಹಾಪ್ರಭು, ಹಿಂದಿನ ಜನ್ಮದ ಸುಕೃತದ ಫಲದಿಂದ ನಮ್ಮ ಸ್ನೇಹವಾದುದೂ ಸರಿಯಷ್ಟೇ. ಆ ಆತ್ಮವಿಶ್ವಾಸವೇ ಮುಂದಿನ ಜನ್ಮ ಬರಲಿ. ಆದರೆ ಇನ್ನೂ ಕೆಲವೇ ಘಳಿಗೆಯಲ್ಲಿ ಈ ಭೌತ ದೇಹದ ಸಂಬಂಧವನ್ನು ಕಡಿದು ನಿಮ್ಮನ್ನೆಲ್ಲಾ ಅಗಲಿ ಹೋಗಬೇಕಾಗಿದೆ."

"ಏನು ಆಗುವುದಿಲ್ಲ ಸುಮ್ಮನಿರು ಸುವರ್ಣ..." ಎಂದು ದಲ್ಲಿದ್ದ ಹಾಲನ್ನು ಬಿಟ್ಟರು. ಅದು ಹರಿಯುತ್ತಿರಲು, ಮಲುಹಣನು ಗಲ್ಲವನ್ನು ಮೆಲ್ಲನೆ ಹಿಡಿದು, ಮತ್ತೆ ಕುಡಿಸಲು ಪ್ರಯತ್ನಿಸಿದ. ಆದರೆ ನೆಲಕ್ಕೆ ಉರುಳಿತು.

"ನಿಮ್ಮನ್ನೆಲ್ಲಾ ನೋಡಿ ಸಂತೋಷವಾಯಿ ಮಹಾಪ್ರಭು...ಪ್ರವರಸೇನ ಮಹಾಪ್ರಭು..ಮಲುಹಣಾ....ಮಲುಹಣ ಎನ್ನುತ್ತಿದ್ದಂತೆಯೇ ಕತ್ತು ಹೊರಳಿತು. ಮಗನು ತಂದೆಯ ಮೇಲೆ ರೊ ಬಿದ್ದು ರೋದಿಸಲಾರಂಭಿಸಿದ.

ಶೋಕದಿಂದ ಪ್ರವರಸೇನ ಮಹಾರಾಜರು..

"ಸುವರ್ಣಭಟ್ಟಾ...ಸುವರ್ಣಾ..." ಎಂದು ಹರಿವ ಕಣ್ಣೀರನ್ನು ಸಿಕೊಂಡರು. ಮಲುಹಣನು ಉಕ್ಕುವ ಕಣ್ಣೀರಿಂದ ತಲೆ ಎತ್ತಿ...

"ಅಯ್ಯೋ ಪ್ರವರಸೇನ ಪ್ರಭು...ಸುವರ್ಣಭಟ್ಟರು ಇನ್ನೆಲ್ಲಿದ್ದಾ ಅವರ ನ್ನಾಗಲೇ ಯಮದೂತರು ಕರೆದೊಯ್ದರು" ಎಂದು ಹಣೆಯ ಚಚ್ಚಿಕೊಂಡರು. ಆತನ ದುಃಖವನ್ನು ನೋಡಿದ ಪ್ರಭುಗಳು ಕರುಣೆ ದನಿಯಲ್ಲಿ..

"ಮಲುಹಣಾ....ಹೋಯಿತು ಹಣೆ...ಇನ್ನೂ ವಿಧಿಯನ್ನೂ.. ಯಾರೂ ಮೀರು ವಂತಿಲ್ಲ. ನಿನ್ನ ಪ್ರೀತಿಯ ತಂದೆ ನಿನಗಿಲ್ಲವಾದ, ನನ್ನ ಪ್ರಾಣಮಿತ್ರ ನನಗಿಲ್ಲವಾದ, ದಾನಿ ಸುವರ್ಣಭಟ್ಟ ಬಡಬಗ್ಗರಿಗಿಲ್ಲ ವಾದ..."

"ಅಯ್ಯೋ ಪ್ರಭು..ತಂದೆಯೇ ನನ್ನ ಆಸ್ತಿ ಎಂತಿದ್ದೆ..ಇನ್ನು ನನ ಗಾರು, ಈ ತಬ್ಬಲಿಗೆ ?"

"ಮಲುಹಣಾ..ದೇವರಿದ್ದಾನೆ... ಧೈರ್ಯಗುಂದಬೇಡ"

ಅಷ್ಟು ಹೊತ್ತಿಗಾಗಲೇ ವಿಷಯ ಊರಲ್ಲೆಲ್ಲಾ ಹರಡಿ, ಜನರುಗ ಳೆಲ್ಲಾ ಬಂದು ಸೇರಿ, ಕಣ್ಣೀರು ಹಾಕುತ್ತಾ ಶವ ಸಂಸ್ಕಾರಕ್ಕೆ ಸಿದ್ಧ ಮಾಡಿದರು.

ಊರ ಸುತ್ತಾ ಸುವರ್ಣಭಟ್ಟರ ಕಳೇಬರವು ಹೊರಟಿತು. ಝೀಲಂ ನದಿಯ ಹತ್ತಿರ ತಂದೆಗೆ ಮಗನೇ ಕಿಚ್ಚಿಕ್ಕಿದ. ಶವ ಸಂಸ್ಕಾರವಾಗಿ ಆತನ ದೇಹವು ಬೂದಿಯಾಗಿ ದೇಹದ ಕಣಕಣವೂ ಝೀಲಂ ನದಿಯ ನೀರಿನ ಮೇಲೆ ಮುಳುಗಿ ಪಾವನವಾಯಿತು. ಮಲುಹಣ, ಕೇಶವಭಟ್ಟರು ಮಿತ್ರರು ಊರಜನರೆಲ್ಲಾ 'ಗೋಳ್' ಎಂದರು.

ಮಲುಹಣನು ಅದನ್ನೇ ದೃಷ್ಟಿಸಿ ಕಣ್ಣೀರು ಹಾಕುತ್ತಾ ಕೈ ಕಾಲು ತೊಳೆದು, ಅಪ್ಪಾಜಿ...ನಿಮ್ಮನ್ನು ಕಾಡ್ಗಿಕ್ಕಿ ಕೈ ತೊಳೆದುಕೊಂಡ ಸಮಯ ಬಂತೇ ? ನಿಮ್ಮನ್ನಪ್ಪಿ ಆನಂದಿಸುವ ಕೈಗಳು ಕಿಚ್ಚಿಗಿಕ್ಕಿ ರಕ್ತಮಯ ದೇಹ ವನ್ನು ಬೂದಿ ಮಾಡಿ ನೀರಿಗೆ ತೇಲಿಬಿಟ್ಟು ಹೊರಟಿರಾ? ನಿಮ್ಮ ಆತ್ಮಕ್ಕೆ ನಾನು ಹಾಲನ್ನೆರೆದು ಪರಲೋಕದಲ್ಲಿ ಶಾಂತಿ ಸುಖಗಳನ್ನು ಆ ಕರುಣಾಮ ಯನು ಕರುಣಿಸಲೆಂದು ಬೇಡಿಕೊಳ್ಳುತ್ತೇನೆ, ಆ ವಿಜಯೇಶ್ವರನಲ್ಲಿ, ಆದರೆ ನನ್ನ ಆತ್ಮಕ್ಕೆ ಸುಣ್ಣವನ್ನು ಹೊಯ್ದು ಹೊರಟಿರಿ"

ಎಂದು ಒಂದೇ ಸಮನೆ ಅಳಲಾರಂಭಿಸಿದ. ಪ್ರಪಂಚದ ವೈಚಿತ್ರ್ಯ ವನ್ನು ನೋಡಿ ಮತ್ತಷ್ಟು ಅಳಲಾರಂಭಿಸಿದ ಮಿತ್ರ ಜಯದೇವ್..

'ಹಿಗೆ ಅಳುತ್ತಾ ಕೂತರೆ ಹೇಗೆ..? ಮೇಲೇಳು ಹೋಗೋಣ"

"ಕರುಳ ಸಂಬಂಧ ನನ್ನನ್ನು ಹೀಗೆ ದುಃಖಕ್ಕೀಡು ಮಾಡಿದ ... ಮಾಡಲಿ?"

"ಇನ್ನೆಷ್ಟು ಅತ್ತರೂ ಸಿಗುವುದಿಲ್ಲ ನಡೆ ಎಂದಾದರೂ ಒಂದು ... ಹೋಗಬೇಕಾಗಿದ್ದ ದೇಹ ಸ್ವಲ್ಪ ಮುಂಚೆ ಹೊರಟಿದೆ. ಹುಟ್ಟಿದವ... ಬದುಕಿದರೆ ಪ್ರಪಂಚ ನಡೆಯುವುದಾದರೂ ಹೇಗೆ ಯೋಚಿಸು" ಎಂದು ಹಿಡಿದು ಮೆಲ್ಲನೆ ಏಳಿಸಿಕೊಂಡು ಹತ್ತಿರದಲ್ಲಿದ್ದ ರಥದ ಮೇಲೆ ಕುಳ್ಳಿ... ಕೊಂಡು ಹೊರಟನು.

ಹಿಂದಿನ ದಿನಗಳ ಹಳೆಯ ದೃಶ್ಯಗಳು ಒಂದೊಂದಾಗಿ ಕಣ್ಣು... ಸುಳಿಯುತ್ತಾ ಹೊರಟಿತು. ಮನೆಯನ್ನು ತಲುಪಿ ತಂದೆಯಿದ್ದ ಕೋಣೆಯ... ನೋಡಿದ. ಪಿಚ್ಚೋ ಎನ್ನಿಸಿತು. ಹಾಗೆಯೇ ಓಡಿ ತನ್ನ ಕೋಣೆಯ ಮಂಚ... ಮೇಲುರುಳಿದ. ಕೇಶವಭಟ್ಟರು ಹಾಲನ್ನು ತಂದಿಟ್ಟು.

"ಕುಡಿಯಿರಿ ಮಲುಹಣ ದೇವರೇ"ಎಂದರು.

"ಭಟ್ಟರೇ ಈ ಸಮಯದಲ್ಲಿ ನಾನು ಹಾಲನ್ನೂಕುಡಿಯಬೇ... ಎಂದು ಒಂದೇ ಸಮನಾಗಿ ಗಳಗಳನೆ ಅಳತೊಡಗಿದ.

ಹೆಚ್ಚಿಗೆ ಮಾತಾಡಿದರೆ ಇನ್ನೂ ದುಃಖಪಡುತ್ತಾರೆ ಎಂದು ... ಆತ ಕಣ್ಣೀರನ್ನು ಒರೆಸಿಕೊಂಡು ಮೆಲ್ಲನೆ ಮಹಡಿಯಿಂದ ಇಳಿದ. ತಂದೆ... ಗುಣ, ಮೌಲ್ಯ ಗಳನ್ನೇ ಲೆಕ್ಕ ಹಾಕುತ್ತಾ ಮಲಗಿದ ಮಲುಹಣ.

"ನನ್ನ ಹೆಜ್ಜೆ ಹೆಜ್ಜೆಗೂ ಸೂಖವನ್ನು ಗಮನಿಸುತ್ತಿದ್ದಂಥ ತಂ... ಇನ್ನಲ್ಲಿ ಸಿಗಬೇಕು ? ಕೊನೆಯುಸಿರಿರುವತನಕ ನನ್ನನ್ನೇ ಸರ್ವಸ್ವ ಎಂ... ತಿಳಿದು ತಮ್ಮ ದೇಹವನ್ನು ಗಂಧದ ಕೊರಡಿನಂತೆ ತೆಯ್ದರು. ನನ್ನ ಹಿತ... ಮನೆಯು ಅದೆಷ್ಟು ಬಿಕೋ ಅನ್ನಿಸುತ್ತದೆ. ಈಗಲೂ ಅವರು ತಿರುಗಾಡು... ದ್ದಾರೆಯೋ, ಮಲುಹಣಾ...ಅನ್ನುತ್ತಾರೆಯೋ ಅನ್ನಿಸುತ್ತದೆ. ನಾ ಕ... ಕನಸುಗಳು ಸತ್ಯವೇ ಆಯಿತು. ಅದಾವ ಅನಿಷ್ಟಕ್ಕೋ, ಆ ಮೈಯಿ, ಆ ಮ...

ಕಾಂತಿ ಇತ್ತು. ದೀಪ ಕೆಡುವಾಗ ಅತ್ಯಂತ ಪ್ರಕಾಶಮಾನವಾಗಿ ಉರಿದು ಕೆಡುವಂತೆ ಅವರ ಕೊನೆಯ ದಿನಗಳಲ್ಲಿ ಬೆಳಗಿ ಕೊಟ್ಟರು. ಇನ್ನು ಈ ಜನ್ಮದಲ್ಲಿ ನಮ್ಮ ತಂದೆಯನ್ನು ಕಾಣುವ ಹಾಗಿಲ್ಲ. ನಾನೇ ಅವರಿಂದ ಸೇವೆ ತೆಗೆದುಕೊಂಡೆನೇ ಹೊರತು ಅವರಿಗೆ ನಾನೇನೂ ಮಾಡಲಿಲ್ಲ. ಇನ್ನು ನನ್ನ ಮುಂದಿನ ದಿನಗಳೇನು ? ನನಗೆ ಮದುವೆ ಮಾಡಿ ಕಣ್ತುಂಬ ನೋಡಬೇಕೆಂದಿದ್ದರು. ಆದರೆ ನಾನು ಆ ವಿಜೃಂಭಣೆಯ ಮದುವೆಯನ್ನು ಮಾಡಿಕೊಳ್ಳುಂತಿಲ್ಲ. ತಂದೆ ನೋಡಿ ಆನಂದಿಸಬೇಕಾಗಿದ್ದ ಮದುವೆ ಅವರಿಲ್ಲದಾಗ ಆದರೆ ಏನು ಪ್ರಯೋಜನ ? ಅದನ್ನೂ ಅವರಿದ್ದಾಗಲೇ ಮಾಡಿಕೊಂಡಿದ್ದರೆ ಅದೆಷ್ಟು ಸಂತೋಷಪಡುತ್ತಿದ್ದರೋ ಅದಕ್ಕೆಲ್ಲಾ ಕಲ್ಲು ಹಾಕಿದವನು ನಾನೇ....ಅಪ್ಪಾಜಿ....ಅಂತ ಇನ್ನು ಯಾರನ್ನು ಕರೆಯಲಿ? ಮಲುಹಣಾ ಅಂತ ಪ್ರೀತಿಯಿಂದ ಯಾರಿಂದ ಅನ್ನಿಸಿಕೊಳ್ಳಲಿ ?ವಿಧಿಯು ಅದೆಷ್ಟು ಬೇಗನೆ ನಮ್ಮ ತಂದೆಯನ್ನು ಕರೆದೊಯ್ಯಿತು ? ಎಷ್ಟು ಬೇಗ ನಮ್ಮನ್ನು ಅಗಲಿ ಅಪ್ಪಾಜಿ ಹೊರಟರು"

ಎಂದು ಅಳುತ್ತಾ ಹಾಗೆಯೇ ಮಲಗಿಕೊಂಡ. ಕೋಣೆಯ ಗೋಡೆಯ ಸುತ್ತಾ ಅಪ್ಪಾಜಿಯ ಚಿತ್ರ ನಾನಾ ಭಂಗಿಗಳಲ್ಲಿ ಸುಳಿದಾಡಿತು.

❋❋❋❋❋

ಮಹಡಿಯ ಮೇಲಿಂದ ವೈಯಾರದ ನಡಿಗೆಯಲ್ಲಿ ಮಲುಹಣೆ ಇಳಿಯುತ್ತಿದ್ದಳು. ಅದನ್ನು ಕೆಳಗಿನಿಂದ ನೋಡಿ ಮನದಲ್ಲಿ ಹಿರಿ ಹಿಗ್ಗಿ ಮಾತನ್ನು ಮುಂದು ವರಿಸುವ ಆಸೆ ಮೂಡಿತು ಪದ್ಮಾವತಿಗೆ.

"ಮಲುಹಣೇ..ನಾಟ್ಯ ಮುಗಿಯಿತೇ ?" ಎಂದಳು.

"ಮುಗೀತಮ್ಮಾ"

"ನಿನ್ನ ನಡೆಗೆ ವೈಯ್ಯಾರದಲ್ಲಿ ನಾಟ್ಯ ಅಂತ ಕಾಣುತ್ತೆ ಕಣವ್ವಾ, ನನ್ನ ಕಣ್ಣನಾಗೆ ಅದಕ್ಕೇ.."

"ಅದಕ್ಕೇ....ಏನವ್ವಾ ?"

"ಶ್ರೀ. ವಿಜಯೇಶ್ವರನ ದೇವಾಲಯದಲ್ಲಿ ನಿನ್ನ ರಂಗ ಪ್ರ
ನೃತ್ಯ ಏರ್ಪಡಿಸಬೇಕು ಅಂತ"

"ಬಹಳ ಸಂತೋಷಕರಣವ್ವಾ...ನನ್ನ ಮೊದಲ ನೃತ್ಯ ಪ್ರದರ್ಶನ ವಿಜಯೇಶ್ವರನಿಗೆ ಅರ್ಪಿತವಾಗುವುದು ನನಗೂ ಸಂತೋಷವೇ ಸರಿ."

"ಆಗ ನೀನು ಅನೇಕ ಧನಿಕರ ಕಣ್ಣಿಗೆ ಬಿದ್ದು ಗಂಡು ಹುಡು ಪೈಪೋಟಿಯಿಂದ ನಾ ಮುಂದು ತಾ ಮುಂದು ಎಂದು ನಿನ್ನುದ್ದ ಹ ಸುರಿಯುತ್ತಾರೆ."

ಈ ಮಾತು ಸ್ವಲ್ಪ ಕಹಿಯಾಗಿ ಕಾಣಿಸಿತು ಮಲುಹಣೆಗೆ. ಹ ಮಾತು ಬೆಳೆಸುವುದರಲ್ಲಿ ಅರ್ಥವಿಲ್ಲ ಎಂದು ತಿಳಿದು ತೋಟದತ್ತ ನಡ

"ಒಳ್ಳೇ ಹುಡುಗಿ"

ಎಂದು ಮುಖವನ್ನು ಸೊಟ್ಟ ಮಾಡಿಕೊಂಡು ಕುಳಿ ಸ್ವರೂಪ್, ಸರೋಜ್ ಅಲ್ಲಿಗೆ ಬಂದರು.

"ಸ್ವರೂಪ್...ಬಾರವ್ವಾ..ನಿನ್ನಲ್ಲೊಂದು ವಿಚಾರ ಹೇಳಬೇಕು"

"ಏನು ಪದ್ಮಾವತವ್ವಾ ?"

"ನಾಳೆ ವಿಜಯೇಶ್ವರ ದೇವಾಲಯದಲ್ಲಿ ಮಲುಹಣೆಯ ರ ವೇಶ ನೀವು ಸಿಂಗಾರ ಅಚ್ಚುಕಟ್ಟಾಗಿ ಮಾಡಬೇಕು "

" ಆಗಲಿ ತಾಯೇ.." ಎಂದು ಹೂಂ ಗುಟ್ಟಿದಳು.

ಮರುದಿನ ಸ್ವರೂಪಳು.. ಸರೋಜ್ ಇಬ್ಬರೂ ಮಲುಹ ಸಿಂಗಾರದ ಕೆಲಸ ದಲ್ಲಿ ಅಣಿಯಾದರು. ಆಕೆಯನ್ನು ಮಾವಿನ ತ ತೋರಣದ ಹಸೆಯ ಮಣೆಯ ಮೇಲೆ ಕುಳ್ಳಿರಿಸಿ ತುರುಬನ್ನು ಹೂಗಳಿಂದ ಅಲಂಕರಿಸಲು ನಕ್ಷತ್ರದ ಗುಂಪಿನಂತೆ ಕಂಡವು. ಆಭರಣ ತೊಡಿಸಲು ಚಂದ್ರಕಾಂತಿಯು ಕೆನ್ನೆಯಮೇಲೆ ಪ್ರಕಾಶಿ ಪಾದಗಳಿಗೆ ಪಾದಮುದ್ರಿಕೆ ಅಲಂಕರಿಸಿದರು. ಕೈಗಳಿಗ ರನ್ನ ಗಡ ಕಂಕಣದಿಂದ ತಿರುವಿ ನೂಕಿ ರತ್ನ ಮುದ್ರಿಕೆಗಳನ್ನು ತೊಡಿಸಿ, ನಾಗ

ಯನ್ನು ಹಾಕಿ ತೋರ ಮುತ್ತಿನ ಹಾರವನ್ನು ಅಲಂಕರಿಸಿ, ಕಣ್ಣಿಗೆ ಕಾಡಿಗೆ ಯನ್ನು ಹಾಕಿ, ಶಶಿ ಬಿಂಬದ ಮುಖಕ್ಕೆ ದೃಷ್ಟಿ ತಾಕದಂತೆ ಕಸ್ತೂರಿ ತಿಲಕವಿಟ್ಟು, ತುರುಬಿಗೆ ಮುಸುಕಿಟ್ಟು ಕಾಶ್ಮೀರ ಉಡುಗೆಯನ್ನು ತೊಡಿಸಿ ಶೃಂಗರಿಸಿದರು.

ಅಷ್ಟರಲ್ಲೇ ಪದ್ಮಾವತಿದೇವಿ ಬಂದು..

"ಸರಿಯಾಗಿ ಸಿಂಗಾರವಾಗಲಿ ಸ್ವರೂಪ್, ಸರೋಜ್, ಆಭರಣಗಳು ನೃತ್ಯ ಮಾಡುವಾಗ ಬೀಳದಿರಲಿ"

ಎಂದು ಹೇಳಿ ದೇವಾಲಯದತ್ತ ನಡೆದಳು. ಸ್ವರೂಪ್ ಸರೋಜ್ ಮಲುಹಣೆಯನ್ನು ದೇವಾಲಯಕ್ಕೆ ಕರೆದುಕೊಂಡು ಬಂದರು.

ಹೊಸ ನಡೆ, ನುಡಿ, ಹೊಸ ಮುಡಿ, ಹೊಸ ನೋಟ, ಹೊಸ ಜವ್ವನದ ಮಲುಹಣೆ ತಿದ್ದಿದ ಚಿತ್ರದಂತಿದ್ದಳು. ಮಂದಗತಿಗೊಪ್ಪುವ ಪಾದಗಳು, ಸೌಂದರ್ಯದ ಹಿಂಭಾವ, ಮುಂಭಾವ, ಹಿತಮಿತ ಮಾಂಸಖಂಡದ ಅಂಗ ಸೌಷ್ಠವ, ಲಾಸ್ಯ ಮೈ, ಕಾಂತಿ ಕಂಗಳು, ಯೌವನದಾಕೆಯನ್ನು ಕರೆತರುತ್ತಿರಲು, ತುಂಬಿಗಳ ಝೇಂಕಾರ, .ಕಂಕಣದ ಠಣತ್ಕಾರ, ನೂಪುರದ ಕ್ರೇಕಾರ, ಪಾದ ಮುದ್ರಿಕೆಯ ಠಣತ್ಕಾರ, ಮದನನ ಧನುವಿನ ಠೇಂಕಾರ, ಬೆರಸಿ ಪುರಜನರ ಕಿವಿಗೆ ಕಣ್ಣಿಗೆ ಹೊಸ ಹೊಸ ಸವಿಯ ಸಾಲಿಡುತ್ತಾ ವಿಲಾಸದಿಂದ ವಿಜಯೇಶ್ವರನ ದೇವಾಲಯದ ರಂಗ ಮಂಟಪಕ್ಕೆ ಬಂದು ಚಂದ್ರಧರನಿಗೆ ಕೈ ಮುಗಿದು ನಿಂತಳು.

ಪದ್ಮಾವತಿಯು ಮಗಳನ್ನು ಕಣ್ಣಾರೆ ನೋಡಿ ಹಿರಿ ಹಿಗ್ಗಿ, ಸುರ ಸುಂದರಾಂಗಿ ಯಾವ ಅಪ್ಸರೆಗೂ ಕಡಿಮೆಯಿಲ್ಲ ಎಂದುಕೊಂಡಳು. ತನ್ನಲ್ಲೇ. ಆಕೆಯ ಅವಯವದ ಚೆಲುವೆಗೆ ಕಂಗಳಿಂದ ದೃಷ್ಟಿಯಾದೀತೆಂದು ನಟ್ಟಿ ತೆಗೆದಳು.

ಕಲಾ ಸರಸ್ವತಿಯಾದ ಮಲುಹಣೆಯ ಮಧುರ ಶ್ವಾಸದಿಂದ ಉಸಿರು ಮನೋ ಹರ ತಾವರೆಯಂತೆ ಗಂಧತುಂಬಿತ್ತು. ಜೊತೆಗೆ ಜವಾಜಿ ಕಸ್ತೂರಿ

ಪುನುಗಿನ ಸುವಾಸನೆ ಸುಗಂಧ ಮಾಡಿತ್ತು. ರಂಗ ಮಂಟಪವನ್ನು ಮಲುಹಣೆ ಚಕೋರ ಚಂದ್ರಿಕೆಯಂತೆ, ಸಂಚಾರವಿಲ್ಲದ ಎಳೆಗಾಳಿಯಂತೆ ಮಧುರ ಫಲದಂತೆ, ಪ್ರಕಾಶಮಾನವಾಗಿ ಬೆಳಗುತ್ತಿದ್ದಳು. ಮಲುಹಣೆಯ ಚೂಪು ಗಲ್ಲದ ಚೆಲುವನ್ನು ನೋಡಿ ಆನಂದಿಸಿ ಬೆರಳಿಂದ ಆಕೆಯ ಮುಖವನ್ನು ಮೇಲೆತ್ತಿ..

"ಮಗೂ..ಭೇಷ್..ಎನ್ನುವಷ್ಟು ಚೆನ್ನಾಗಿ ನೃತ್ಯಮಾಡಿ ಎಲ್ಲರ ಮನಗಳನ್ನು ಆಕರ್ಷಿಸಬೇಕು."

ರಂಗ ಮಂಟಪದಲ್ಲಿ ಪರಮ ಭಕ್ತರು, ಸಚಿವರು, ರಾಜಪುತ್ರರು ಲೋಕಾ ನುಭವವುಳ್ಳ ದೊಡ್ಡವರು, ಕವಿಗಳು, ಸಾಹಿತಿಗಳು, ಕಲಾವಿದರು, ಸತ್ಕರು, ವಿಳಾಸಿನಿಯರು, ಪುರಜನರು, ಪರಿಜನರು ಸೇರಿದ್ದಾರೆ. ರಂಗ ಮಂಟಪದ ಮಧ್ಯದಲ್ಲಿ ತಾಳದ ಗತಿ ಕೊಡುವ, ಮದ್ದಳೆಯ ಸ್ವರ ಸಮ್ಮೇಳನ, ಸಂಗೀತದವರಿಂದಲೂ ವಾವುಜೆ ವಾದ್ಯದರಿಂದಲೂ ಕಂಡಿತ್ತು.

ತಂದೆಯನ್ನು ಕಳೆದುಕೊಂಡು ಮಾಸ ಉರುಳಿದ್ದರೂ ಮಲುಹಣನಿಗೆ ಆಕಾಶವೇ ಕಳಚಿ ಬಿದ್ದಂತಾಗಿತ್ತು. ತಲೆಯ ಮೇಲೆ ಯೋಚನೆ ತುಂಬಿ ಕುಳಿತಿದ್ದ. ಅಲ್ಲಿಗೆ ವಿಜಯ್ ಬಂದು ಆತನ ಸ್ಥಿತಿಯನ್ನು ಗಮನಿಸಿ ಮೆಲ್ದನಿಯಲ್ಲಿ ಮಾತನಾಡಿಸಿದ.

" ಇದೇನು ಮಲುಹಣಾ ಹೀಗಾಗ್ಬಿಟ್ಟೆ ? ಇನ್ನು ಎಷ್ಟು ದಿನ ಯೋಚಿಸಿದರೆ ತಾನೆ ಏನು ಪ್ರಯೋಜನ ?"

"ಹೌದು...ಆ ಚಿಂತೆಯೆಂಬ ಕಾರ್ಮೋಡ ಕರಗಿ ನೀರಾಗಿ ಸುಂದರ ಮನಸ್ಸಿಗೆ ಹಗುರವಾದಂತಾಗುತ್ತದೆ."

"ನೀನು ಹೀಗಿದ್ರೆ ಆಯ್ತಪ್ಪಾ. ಅವರ ಆತ್ಮಕ್ಕೆ ಶಾಂತಿ ದೊರಕಬೇಕಾದರೆ ನೀನು ಸಂತೋಷವಾಗಿರಬೇಕು"

"ಅದಕ್ಕೆ ಏನು ಮಾಡಬೇಕು ತೋಚುತ್ತಿಲ್ಲ."

"ಮಲುಹಣ..."

"ಮರೆಯಲು ಸಾಧ್ಯವಾಗುತ್ತಿಲ್ಲ."

"ಮರೆವನ್ನು ದೇವರು ಕೊಡದಿದ್ದರೆ ಮನುಷ್ಯ ಬದುಕಲೇ ಆಗುತ್ತಿರಲಿಲ್ಲ. ಜೀವನದಲ್ಲಿ ಅನೇಕ ಘಟನೆಗಳು ನಡೆಯುತ್ತವೆ. ಚಿಂತೆ ಮಾಡುತ್ತೇವೆ. ಹಾಗೆಯೇ ಅದು ಹೊರದೂಡಲ್ಪಡುತ್ತದೆ. ಇಲ್ಲದಿದ್ದರೆ ಮನುಷ್ಯನಿಗೆ ಜೀವಿಸಲೇ ಆಗುತ್ತಿರಲಿಲ್ಲ."

"ಹೋಗಲಿ ಆತ್ಮಶಾಂತಿಗೆ ದೇವಾಲಯದತ್ತ ತಿರುಗಾಡಿಕೊಂಡು ಬರೋಣ.."

"ಆಗಲೀ"ಶಾಲನ್ನು ಹೊದ್ದುಕೊಂಡು ಸಿದ್ಧನಾಗಿ ಹೊರಟ. ದಾರಿಯಲ್ಲಿ ಜನರು ದೇವಾಲಯದತ್ತ ಕಿಕ್ಕಿರಿದು ಹೋಗುತ್ತಿದ್ದರು. ದೇವಾಲಯವು ತಳಿರುತೋರಣಗಳಿಂದ ಅಲಂಕೃತವಾಗಿತ್ತು. ಅದನ್ನು ನೋಡಿದ ಮಲುಹಣ ಮಿತ್ರನನ್ನು ಪ್ರಶ್ನಿಸಿದ.

"ಈ ಹೊತ್ತು ಏನು ದೇವಾಲಯದಲ್ಲಿ?"

"ಇಂದು ಪದ್ಮಾದೇವಿಯ ಮಗಳಾದ ಮಲುಹಣೆಯ ರಂಗ ಪ್ರವೇಶ"

ಆ ಮಾತುಗಳು ಚಿಂತೆಯನ್ನು ಸ್ವಲ್ಪ ದೂರಮಾಡಿ ಹಿಂದಿನ ಸವಿ ನೆನಪು ಮರುಕಳಿಸಿತು. ಮಲುಹಣನಿಗೆ ಅದನ್ನು ಕಣ್ತುಂಬ ನೋಡುವ ಬಯಕೆ ಆತನ ಮನದಲ್ಲಿ ಮೂಡಿತು. ಮತ್ತೆ ಮನದಲ್ಲಿ ಆಕೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಬಯಕೆಯಾಗಿ ಅದನ್ನು ಮಿತ್ರನಲ್ಲಿ ತೋಡಿಕೊಳ್ಳುವ ಮನಸ್ಸಾದರೂ ಏಕೋ ಸಂಕೋಚವಾಗಿ ಹಾಗೆಯೇ ಮಾತಾಡದೆ ದೇವಾಲಯದತ್ತ ನಡೆದ.

ಏರು ಜವ್ವನೆ ಮಲುಹಣೆ, ಕೆಂಪಡರಿದ ಕೆನ್ನೆಗಳಿಂದ, ಅಂಗಾಂಗ ಅಲಂಕೃತಳಾಗಿ, ಪುಷ್ಪಾಂಜಿತಳಾಗಿ ನಿಂತಿರಲು, ಜನರೆಲ್ಲ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿರಲು ಜವನಿಕೆಯು ಮೆಲ್ಲನೆ ಸರಿಯಿತು.

ನೊಸಲಿನಲ್ಲಿ ವಿಭೂತಿಯನ್ನು, ಕಿವಿಯಲ್ಲಿ ಕೀಲಿಸಿದ ಕರ್ಣಾಭರಣ ತೊಟ್ಟು, ತೋರಹಾರ ಅಲಂಕಾರ ಮಾಡಿ, ಕಸ್ತೂರಿ ತಿಲಕವಿಟ್ಟ ವ್ಯಕ್ತಿಯು

ಮಲುಹಣೆಯ ಕಣ್ಣಿಗೆ ಬಿತ್ತು. ಸಂತಸ ಉಕ್ಕಿತು. ತನ್ನನ್ನು ಅರಿಸಿಕೊಂಡರೆ ನನ್ನ ಜೀವನ ಸಾರ್ಥಕ ಎನ್ನಿಸಿತು ಮಲುಹಣೆಗೆ. ಅಷ್ಟೇ ಅಲ್ಲ ಪದ್ಮಾವತಿಗೂ ಸಹ ಮಗಳನ್ನು ವರಿಸಿದರೆ ಸಾಕು ಎನ್ನಿಸಿತು. ಮಲುಹಣೆಗೆ ಕೂಡಲೇ ಮನ ಬೆವರಿತು, ಹೃದಯ ನಡುಗಿತು, ತನು ಬೆವರಿತು, ಗತಿ ಸ್ತಂಭಿಸಿ, ಪಂಚೇಂದ್ರಿಯಗಳೂ ಆತನ ರೂಪನ್ನು ಆಕರ್ಷಿಸಿ ಆತನ ಸ್ವರೂಪ ಮನದಲ್ಲಿ ಅಚ್ಚೊತ್ತಿ, ಅಂಗ ಸಂಗ ಬಯಸಿ ರೋಮಗಳು ಪುಳಕಿತವಾದವು.

ಮಲುಹಣನು ಆಕೆಯ ಸೌಂದರ್ಯವನ್ನು ನೋಡಿ ಆ ಸವಿ ನುಡಿಗಳನ್ನು ಆಲಿಸಲು ಕಾತುರಪಟ್ಟಿತು ಆತನ ಮನಸ್ಸು. ಅವಯವಗಳು ಮೃದುಮೊಗದ ಇಚ್ಛೆಯನ್ನು ತೋರಿದವು. ಮನಸ್ಸು ನೋಟಕೊಪ್ಪುವ ರೂಪನ್ನು ಎಚ್ಚರಿಸಿತು. ನವ ಮಧುರವನ್ನು ಜಿಹ್ವೆಯು ಬಯಸಿತು. ನವ ಗಂಧದ ವಾಸನೆಯನ್ನು ಅರಿಯಲು ನಾಸಿಕ ಅನುವಾಗಿತ್ತು. ನಡಿಗೆಯು ಸಂಗೀತದಲ್ಲಿ ಬೆರೆತು ಆತುರಪಡಿಸಿತು. ಕೈಗಳು ತನು ರುಚಿಯನ್ನು ಬಯಸಿ ಕುಣಿಯಲಾರಂಭಿಸಿದವು. ಕರಣಗಳು ಭೋಗ ಸಂಪತ್ತನ್ನು ಬಯಸಿದವು. ಸರ್ವೇಂದ್ರಿಯಗಳು ಸುಖದ ಸುಗ್ಗಿಯನ್ನು ಬಯಸಿ ಷೋಡಶ ಪ್ರಾಯವು ಆಕೆಯ ಅಂಗಾಂಗ ಸವಿಯಲು ಚಿಂತಿಸಿತು.

ನೃತ್ಯವು ಆರಂಭವಾಯಿತು. ನಾಟ್ಯ ಮಯೂರಿಯ ಹಾವಭಾವ ವಿಲಾಸವು ಸೇರಿದ್ದ ಎಲ್ಲರನ್ನೂ ಆಕರ್ಷಿಸಿತು. ಮಿತ್ರ ಜಯದೇವ ಮಲುಹಣನನ್ನು ಪ್ರಶ್ನಿಸಿದ.

"ಹೇಗಿಧೆ ನೃತ್ಯ ?"

"ಬಹಳ ಸೊಗಸಾಗಿದೆ"

"ನಿಮಗೆ ಬೇಕಾದವರ ನೃತ್ಯ ಬೇಡವಾಗುತ್ತದೆಯೇ ?"

"ಹೌದು ಅದು ಸಹಜವೇ ಸರಿ"

ನೃತ್ಯಕ್ಕೆ ಕೈ ಚಪ್ಪಾಳೆ ಹೊಡೆದಿದ್ದೇ ಹೊಡೆದದ್ದು ಜನರುಗಳು. ಅವರ ಜತೆಗೆ ಇವರು ಕರತಾಡನ ಬೆರೆಸಿದರು, ನೃತ್ಯ ಮುಗಿಯಲು, ಎಲ್ಲರೂ ಆಕೆಯ ನೃತ್ಯ ರೂಪವನ್ನು ಹೊಗಳುತ್ತಾ ಹೊರಟರು.

ನೃತ್ಯ ಮುಗಿದ ಮೇಲೆ ಮನೆಗೆ ಬಂದು ಮಲುಹಣ ಮಲಗಿದ, ನಿದ್ದೆ ಬರಲಿಲ್ಲ. ಕಣ್ಣೊಂಬೆಗಳ ಒಳಗೂ ಆಕೆಯ ನೃತ್ಯ ಆರಂಭವಾಯಿತು. ಮೊದಲ ದಿನದ ನೋಟ, ಎರಡನೇ ದಿನದ ಸ್ಪರ್ಶ, ಮೂರನೇ ದಿನದ ನೃತ್ಯ-ಸಂಗೀತಗಳು ಮತ್ತಷ್ಟು ಹುಚ್ಚ ನನ್ನಾಗಿ ಮಾಡಿತು. ಮನಸ್ಸು ನಾನಾ ವಿಧವಾಗಿ ಏನು ಮಾಡುವುದು ? ಎಂದು ಚಿಂತಿಸಿತು. ಉತ್ತರ ಸಿಗದೆ ಹಾಗೆಯೇ ಉರುಳಿದ. ಬೆಳಗಿನವರೆಗೂ ಏನೇನೋ ಕಲ್ಪಿಸಿಕೊಂಡ. ನಿದ್ದೆ ಯಿಲ್ಲದೆ ಬೆಳಗು ತುಂಬಿಸಿದ.

ಮರುದಿನ ಜಯದೇವ್ ಬಂದ. ಮಂಚದ ಮೇಲೆ ಪಿಳಿ ಪಿಳಿ ಕಣ್ಬಿಟ್ಟು ಮಲಗಿದ್ದ ಮಲುಘಣನತ್ತ ದೃಷ್ಟಿ ಹರಿಸಿ..

"ಏನು ಮಲುಹಣಾ ರಾತ್ರಿಯೆಲ್ಲಾ ನಿದ್ದೆ ಹತ್ತಲಿಲ್ಲವೇನು ?"

"ಇಲ್ಲ..."

"ಗೊತ್ತಾಯಿತು ಬಿಡು."

"ನಿನ್ನ ಕಲ್ಪನೆಯು ನನಗೆ ಗೊತ್ತು. ಯಾವ ವಿಷಯವನ್ನಾದರೂ ಸ್ನೇಹಿತನಲ್ಲಿ ಹೇಳುವುದಕ್ಕೇನು ಸಂಕೋಚ ? ನಮ್ಮ ಮನದಲ್ಲಾಗುವ ದುಃಖ ಸಂತೋಷ, ಕಷ್ಟ- ಸುಖಗಳನ್ನು ಹೇಳಿಕೊಳ್ಳಲೇಬೇಕು."

"ಅದೇನು ಮಲುಹಣಾ ಹೇಳು, ನನ್ನ ಕೈಲಿ ಸಾಧ್ಯವಾದಷ್ಟು ಮಾಡು ವೆ"

"ನಿನಗೇನು ಹೇಳುವುದು ? ನೀನೇ ನನ್ನ ಮನಸ್ಸನನ್ನು ಅರ್ಥಮಾ ಡಿಕೊಂಡಿರುವೆ"

"ಮಲುಹಣಾ...ಬೇಗ ಒಂದು ಮದುವೆ ಮಾಡಿಕೊಂಡರೆ ಉತ್ತಮ ವಲ್ಲವೇ ?"

"ಅದು ನನಗೆ ಬೇಕಿಲ್ಲ" ಮಾತು ಮುಂದುವರಿಸುವುದರಲ್ಲಿ ದುಗುಡ ಉಕ್ಕಿತು.

"ನಮ್ಮ ತಂದೆ ತೀರಿಹೋದ ಮೇಲೆ ಅದು ನನ್ನ ಭಾಗಕ್ಕೆ ಕನಸು. ಆಗದಿದ್ದರೆ ಕಣ್ಣೆದುರು ಆಗಬೇಕಾಗಿತ್ತು. ಆದರೆ ಈಗ ಆಗುವಂತಿಲ್ಲ"

"ಹಾಗೆಲ್ಲಾ ಸಂಕಲ್ಪ ಮಾಡಬಾರದು"

" ವಿಜಯೇಶ್ವರನ ಮೇಲೆ ಆಣೆಯಿಟ್ಟುರುವೆ"

"ಹಾಗಾದರೆ..."

"ನೀನೇ ಏನಾದರೂ ಸೂಚಿಸುತ್ತೀಯಾ ?"

"ಅದಕ್ಕೇ ಮಲುಹಣೆಯೊಡನೆ ಗೆಜ್ಜೆಪೂಜೆ ಮಾಡಿಕೊಳ್ಳೋಣ ಎಂದಿರುವೆಯೇನು ?"

"ಅದೊಂದೇ ದಾರಿಯೆಂದೇ ತೋರುತ್ತದೆ. ಏಕೆಂದರೆ ನನ್ನ ಮನಸ್ಸು ಆಕೆಯಲ್ಲಿ ನಾಟಿರುವುದಲ್ಲದೆ ನನ್ನ ಚಿತ್ತವನ್ನು ಹಗಲಿರುಳು ಕಲಕುತ್ತಿರುವಳು"

"ಇದು ಒಳ್ಳೆಯದಲ್ಲ ಎಂದು ನನ್ನ ಭಾವನೆ. ಸರಿಯಾಗಿ ಯೋಚನ ಮಾಡು ಮಲುಹಣಾ..ವೇಶ್ಯಾ ಸಹವಾಸ ಕೆಟ್ಟದು."

"ಇಲ್ಲ...ಹೋಗಿ ಆಕೆಯ ತಾಯಿಯನ್ನು ಕೇಳಿ ಬಾ...ಜಯದೇವ್ ಕೋಟಿ ವರಹಗಳನ್ನು ಕೊಡುವೆನೆಂದು ತಿಳಿಸು. ಅಷ್ಟೇ ಏನು ಯಾವ ಸಾಹುಕಾರ ಎಷ್ಟು ಕೊಡುತ್ತಾನೆಯೋ ಅದರ ಎರಡರಷ್ಟು ಸುರಿಯುತ್ತಾನೆ ಎಂದು ಹೇಳಿ ನನಗೆ ಗೆಜ್ಜೆ ಪೂಜೆಯನ್ನು ನಡೆಸಿಬಿಡು. ಆಗ ನನ್ನ ಮನಸ್ಸಿಗೆ ಸ್ವಲ್ಪ ಶಾಂತಿ ಸಮಾಧಾನ ಸಿಗಬಹುದು."

"ಇಷ್ಟರ ಮೇಲೆ ನಿನ್ನ ಇಷ್ಟ, ಹೋಗಿಬರುತ್ತೇನೆ"

"ಅಷ್ಟು ಮಾಡಿದರೆ ಪ್ರಾಣಮಿತ್ರನ ಉಪಕಾರವನ್ನು ಸದಾ ನೆನೆದು ಕೊಳ್ಳುತ್ತೇನೆ."

"ಆಗಲಿ" ಎಂದು ಜಯದೇವ್ ಮಲುಹಣೆಯ ಮನೆಯ ಕಡೆಗೆ ನಡೆದ.

ಪದ್ಮಾವತಿ ಮನೆಯ ಹಜಾರದಲ್ಲಿ ಕುಳಿತು ಮಲುಹಣೆಯೊಂದಿಗೆ ಏನೋ ಸಂಭಾಷಣೆಯಲ್ಲಿ ತೊಡಗಿದ್ದಳು.

"ಮಲುಹಣೇ..ಭಾರತೀ ಪೀಠದ ಸಾಹುಕಾರನೊಬ್ಬ ಹತ್ತು ಸಹಸ್ರ ವರಹ ಕೊಡಲು ಮುಂದೆ ಬಂದಿದ್ದಾನೆ; ಆದ್ದರಿಂದ ಗೆಜ್ಜೆಪೂಜೆ ಮುಂದಿನ ವಾರ ಇಟ್ಟುಬಿಡಬೇಕು ಅಂತಿವ್ನಿ"

ದುಗುಡದಿಂದ ಕಂಗಳಿಂದ ನೀರು ಹರಿಯಿತು. ಪದ್ಮಾವತಿ ಅದನ್ನು ಗ್ರಹಿಸಿ..

"ಶುಭಕಾರ್ಯ ಮಾಡುವಾಗ ಹೆಂಗಸು ಹಾಗೆಲ್ಲಾ ಭೂಮಿ ಮ್ಯಾಗೆ ಕಣ್ಣೀರು ಹಾಕಬಾರ್ದು."

"ಅವ್ವಾ...ನೀನೂ ಹೀಗೆ ಮಾಡಿ ಮನಸ್ಸನ್ನು ನೋಯಿಸುವುದಕ್ಕಿಂತ ನನ್ನನ್ನು ಜೀವಸಹಿತ ಕೊಂದುಬಿಡು. ಅಲ್ದೇಹೋದ್ರೇ ಹಾಗೆ ನನ್ನನ್ನು ಬಿಟ್ಟುಬಿಡು"

"ಹೂಂ.. ಸನ್ಯಾಸಿಯಾಗ್ಬುಡೇ..ಸುಮ್ನೆ ಕೂತುಕೊಂಡು ತಿನ್ನೋಣ ಅಂತ ನೋಡ್ದೆ ಅಲ್ವಾ ?ಕೂತುಣ್ಣೋನ್ಗೆ ಕುಡಿಕೆ ಒಂಭತ್ತಾದ್ರೂ ಸಾಲದು ಅಂತ ನೀನೋ ಕೂತ್ಕೋತೀನಿ ಅಂತೀಯೆ ಕಣೆ, ನಾನು ಸಂಸಾರ ತೂಗಿ ಸೋದು ಹೇಗೆ ?ನನ್ನ ಹತ್ತಿರ ಕಾಸಿಲ್ಲ, ದುಡ್ಡಿಲ್ಲ, ಯೌವನ ಮೊದಲೇ ತೀರೋಗಿದೆ. ಇನ್ನು ಕೆಲವು ದಿನವಾದ್ರೆ ಸಾಯಬೇಕು, ನನಗೆ ಇನ್ನಾರು ಕೊಡ್ತರೆ ? ಇನ್ನು ನಿನ್ನ ಸಂಪಾದ್ನೆಯಿಂದ್ಲೇ ನಮ್ಮ ಜೀವನ ಸಾಗಬೇಕು."

"ಆ ಸಂಪಾದ್ನೆಯಿಂದ ಉಂಡೋದೆಲ್ಲಾ ಮಣ್ಣೇ.."

ಹೀಗೆ ಮಾತನಾಡುತ್ತಿರುವಲ್ಲಿಗೆ ಜಯದೇವ್ ಬಂದ. ಪದ್ಮಾವತಿ ಆತನನ್ನು ನೋಡಿ, ಎದ್ದು ಆದರಿಸಿ..

"ಬನ್ನಿ....ಸ್ವಾಮಿ...ಬನ್ನಿ..." ಎಂದು ಪೀಠ ತೋರಿಸಿದಳು. ಆತ ಕುಳಿತ. ಮಲುಹಣೆಗೆ ಈ ಪೀಡೆ ಎಲ್ಲಿ ಬಂತು ಅಲ್ಲಿಂದ ಬೇಸರದಿಂದ ನಡೆದಳು. ಪದ್ಮಾವತಿ ಮುಗುಳ್ನಗುತ್ತಾ ಬಂದಳು. ಜಯದೇವ್ ಮಹಡಿ ಯನ್ನು ಹತ್ತುವವರೆಗೂ ಆಕೆಯನ್ನು ಕಣ್ಣಿಗೆಟಕಿಸಿಕೊಂಡು ನೋಡಿದ.

ಪದ್ಮಾವತಿ ಕೆಮ್ಮುತ್ತಾ..

"ಏನು ಬಂದ್ರೀ ? ನಿಮ್ಮ ಹೆಸರೇನು ?" ಎಂದು ಒಂದೇ ಬಾರಿಗೆ ಎರಡು ಪ್ರಶ್ನೆಗಳನ್ನು ಕೇಳಿದಳು.

"ನಾನು ಜಯದೇವ್ ಅಂತ."

ಮಾತನಾಡುತ್ತಿರಲು ಮಲುಹಣೆ ಮೇಲಿಂದ ಇಬ್ಬರ ಸಂಭಾಷಣೆಯನ್ನು ಆಲಿಸಿದಳು. ಪದ್ಮಾವತಿ ಮತ್ತೆ ಆತನನ್ನು ಪ್ರಶ್ನಿಸಲಾರಂಭಿಸಿದಳು.

"ಏನು ಬಂದ್ರಿ...?"

"ನಿಮ್ಮ ಮಲುಹಣೆಗೆ ಗೆಜ್ಜೆ ಪೂಜೆ ಯಾವಾಗ ?"

"ಯಾವಾಗ ಅಂದ್ರೇನಪ್ಪಾ..ಬೇಕಾದಷ್ಟು ಜನ ಬಂದು, ಹತ್ತು, ಇಪ್ಪತ್ತು ಸಾವಿರ, ಹೊನ್ನು ಸುರಿತೀವಿ ಅಂತಿದ್ದಾರೆ, ಇನ್ನು ಯಾವ ನಿಶ್ಚಯಕ್ಕೂ ಬಂದಿಲ್ಲ. ಇನ್ನೊಂದು ವಾರಕ್ಕೆ ಮಾಡಿಬುಡಬೇಕು ಅಂತಿವ್ನಿ.." ಮದುಕಿಯ ಮುಖ ಅರಳಿತು.

"ನಾನು ಜಯದೇವ್ ಅಂತ, ಮಲುಹಣನ ಸ್ನೇಹಿತ"

ಎಂದಾಗ ಆಕೆಯ ದೇಹ ಇಮ್ಮಡಿಯಾಯಿತು. ಮಲುಹಣೆಗೆ ಸಂತೋಷದ ಬುಗ್ಗೆ ಉಕ್ಕಿತು. ಆತನನ್ನು ನೋಡಿ ಹಿಂದೆಂದೋ ನೋಡಿದ ಕಲ್ಪನೆ ಆಯಿತು. ಮಾತು ಏನು ಮುಂದುವರಿಯುವುದೋ ಎಂಬುದನ್ನು ಮೆಲುಕು ಹಾಕುತ್ತಾ ನಿಂತಳು. ಜಯದೇವ್ ಮಾತು ಬೆಳೆಸಿದ.

"ನೀವು ಒಪ್ಪಿದರೆ ನಿಮ್ಮ ಮಗಳ ಗೆಜ್ಜೆ ಪೂಜೆ ಮಲುಹಣನಿಗೆ ಆಗಲಿ"

"ಅದಕ್ಕೇನಂತಪ್ಪಾ, ಆಗಲಿ...."? ಎಷ್ಟು ಕೊಡುತ್ತಾರೆ ?"

"ಕೊಡುವುದೇನು ಸರ್ವಸ್ವವೂ ನಿಮಗೇ ಅಲ್ಲವೇ ? ಆತನಿಂದ ಕೋಟಿ ವರಹ ಕೊಡಿಸುವೆ"

"ಹೌದಾ..."

"ಹೌದೇನು ಯಾವ ಸಾಹುಕಾರ ಎಷ್ಟು ಕೊಡುತ್ತಾನೆಯೋ ಅದರ ಎರಡರಷ್ಟು ಕೊಡಿಸುವೆ. ಸುವರ್ಣಭಟ್ಟರ ಆಸ್ತಿಯೆಲ್ಲಾ ನಿಮಗೇ ಆಗುತ್ತದೆ ಅದಕ್ಕೇಕೆ ಯೋಚನೆ?"

ಮಲುಹಣೆಗೆ ತನ್ನ ಕನಸು ನನಸಾಯಿತೆಂದು ಆತ್ಮಾನಂದವಾಯಿತು. ಪದ್ಮಾವತಿ ಸಂತಸದ ಏರುದನಿಯಲ್ಲಿ..

"ಮಲುಹಣೇ....ಮಲುಹಣೇ..." ಕೂಗಿದಳು. ನಾಚಿ ತಲೆ ತಗ್ಗಿಸಿ ಕೊಂಡು ಮಲುಹಣೆ ಕೆಳಗಿಳಿದು ಬಂದಳು,. ಆಕೆಯನ್ನು ಕುರಿತು ಪದ್ಮಾವತಿ..

"ಏನು ಹೇಳವ್ವಾ..ನಾನು ಹೇಳಿ ಕಳುಹಿಸಬೇಕು. ಮಲುಹಣನ ಕೈ ಹಿಡಿಯುವ ಮನಸ್ಸಿದೆಯೋ ಇಲ್ಲವೋ ?"

ಮೌನವಾವರಿಸಿತು. ಜಯದೇವ್ ಅದನ್ನು ಗಮನಿಸಿ..

"ಮೌನ ಎಂದರೆ ಅದು ಸಮ್ಮತಿ ಎಂದೇ ಅರ್ಥ"

ಮೆಲ್ದನಿಯಲ್ಲಿ

"ಇನ್ನೆಷ್ಟು ನಿನಗೆ ಸತಾಯಿಸಿದರೂ ನೀನು ಗೆಜ್ಜೆ ಪೂಜೆ ಮಾಡದೆ ಬಿಡೆ, ನಿನ್ನ ಇಷ್ಟ ಒಪ್ಪಿದ ಹಾಗೆ ಮಾಡು, ಇದಕ್ಕೆ ನಾನು ಒಪ್ಪಿದ್ದೇನೆ "

ಈ ದನಿಗೆ ಕಾದಿದ್ದ ಪದ್ಮಾವತಿ ಮಗಳನ್ನು ಹೋಗಿ ಬಾಚಿ ತಬ್ಬಿ ಕೊಂಡಳು. ಮುಖದಿಂದ ನೆಟ್ಟಿಯನ್ನು ನೇವರಿಸಿ ತೆಗೆದಳು.

ಜಯದೇವ "ನಾನು ಬರುತ್ತೇನೆ. ಮುಂದಿನ ವಾರ ಸಿದ್ಧತೆ ಮಾಡಿ" ಎಂದು ಹೇಳಿ ಹೊರಟ...ಪದ್ಮಾವತಿ.

" ಆ ವಿಜಯೇಶ್ವರ ನಿನಗೆ ಒಳ್ಳೇ...ಬುದ್ಧಿ ಕೊಟ್ಟ ಕಣವ್ವಾ" ಎಂದು ಹಿರಿ ಹಿಗ್ಗಿದಳು. ಒಪ್ಪಿಗೆ ವಿಷಯವನ್ನು ಸಂಗ್ರಹಿಸಿ ಜಯದೇವ ಮಲುಹಣನ ಮನೆಗೆ ಬಂದನು. ಮಲುಹಣನು ಓದುತ್ತಿದ್ದ ಹಾಗೆಯೇ ಮಿತ್ರನತ್ತ ದೃಷ್ಟಿ ಬೀರಿ..

"ಏನು ಹೋದ ಕಾರ್ಯ ಕಾಯೋ ಹಣ್ಣೋ ?"

"ನಾನು ಹೋದ ಕಾರ್ಯ ಕಾಯೇ ಅಲ್ಲ, ಹಣ್ಣೇ ಯಾವಾಗ್ಲೂ'

"ಬಹಳ ಸಂತೋಷ ಬಾ...ಕುಳಿತುಕೋ"

"ಬಹಳ ಸಂತೋಷ" ಎಂದು ಕುಳಿತು

"ಮುಂದಿನ ವಾರ ಗೆಜ್ಜೆಪೂಜೆ"

"ಹಾಗಾದರೆ ಮಲುಹಣೆ ನನ್ನವಳೇ"

"ಅಲ್ಲ..."

"ಅಂದರೆ ?"

"ನೀನು ಮಲುಹಣೆಯವನು"

"ಅಷ್ಟೇ ತಾನೇ ಇದೇನು ಹೇಳುತ್ತಾನೆಯೋ ಅನ್ನುತ್ತಿದ್ದೆ" ಎಂದು ಸಂತಸದಲ್ಲಿ ಆತನನ್ನು ಅಪ್ಪಿಕೊಂಡ.

"ಇಕೋ...ಬಿಡು...ನನ್ನನ್ನೇಕೆ ಬಂಧಿಸಿಕೊಂಡೆ, ನೀನು ಬಂಧಿಸಿ ಕೊಳ್ಳುವುದು ಬೇರೆ?"

ಇಬ್ಬರೂ ನಕ್ಕರು.

"ಎಲ್ಲಿ ಹಣ ಕೊಡು, ಕೊಟ್ಟು ಬರುತ್ತೇನೆ"

"ನೀನೇ ತೆಗೆದುಕೊಂಡು ಹೋಗು..." ಎಂದು ಕೈ ತೋರಲು ಜಯದೇವ್ ಸ್ವಲ್ಪ ಹಣವನ್ನು ತೆಗೆದುಕೊಂಡು ಕುದುರೆಯನ್ನೇರಿ ಪದ್ಮಾವತಿಯ ಮನೆಗೆ ಕೊಡಲು ಹೋದನು.

ಮಲುಹಣೆಗೆ ಸಿಂಗಾರವಾಯ್ತು, ದೇವಾಲಯವೂ ಮನೆಯೂ, ತಳಿರು ತೋರಣದಿಂದ ಅಲಂಕಾರವಾಯ್ತು. ಪದ್ಮಾವತಿ, ಸ್ನೇಹಿತೆಯರಾದ ಸ್ವರೂಪ್, ಸರೋಜ್, ಎಲ್ಲರೂ ಸೇರಿ ಆಕೆಗೆ ಅಲಂಕಾರ ಮಾಡಿ, ಕಾಲಿಗೆ ಕಟ್ಟಿ ನೃತ್ಯವೆಸಗಿದರು. ಆಮೇಲೆ ಬೀದಿಯಲ್ಲೆಲ್ಲಾ ಮೆರವಣಿಗೆಯಾಗಿ ಮನೆಗೆ ಕರೆದುಕೊಂಡು ಬಂದರು. ಎಲ್ಲರೂ ಶಾಸ್ತ್ರ ಮುಗಿಸಿದರು. ಅವರ ಕುಲದವರು ಇದರಿಂದ ಮಲುಹಣ ಮಲುಹಣೆಯರ ಸಂತೋಷಕ್ಕೆ ಪಾರವೇ ಇಲ್ಲ ಎನ್ನಿಸಿತು. ಬೀದಿಯಲ್ಲೆಲ್ಲಾ ಜನರು ತುಂಬ ನೋಡಲಾರಂಭಿಸಿದರು. ಪದ್ಮಾವತಿಯ ಸಂತೋಷಕ್ಕೆ ಪಾರವೇ ಇಲ್ಲ ಎಂದಂತಾಗಿತ್ತು. ಪದ್ಮಾವತಿ ಹೊಸ ಉಡುಗೆ ಉಟ್ಟು ಮುಂದಾಗಿ ಹೊರಟಳು. ಮಿಕ್ಕೆಲ್ಲರೂ ಆಕೆಯನ್ನು ಹಿಂಬಾಲಿಸಿದರು.

ಮನೆಯಲ್ಲಿ ಮಲುಹಣ, ಮಲುಹಣೆಯರಿಗೆ ಸಿಂಗಾರ ಮಾಡಿ ಕುಳ್ಳಿರಿಸಿ ಶಾಸ್ತ್ರ ಮಾಡಿದರು. ಮಂಗಳ ಗೀತೆಗಳನ್ನು ಹಾಡಿದರು. ನೆರೆದ

ಸ್ತ್ರೀಯರಿಗೆಲ್ಲಾ ವೀಳ್ಯದ ಹಂಚಿಕೆಯಾಯಿತು. ಅದಾದ ಕೂಡಲೇ ಊಟದ ಸಿದ್ಧತೆ ಆಯಿತು. ಎಲ್ಲರೂ ಊಟ ಮುಗಿಸಿ ತಮ್ಮ ತಮ್ಮ ಮನೆಗೆ ತೆರಳಿದರು. ಹೆಣ್ಣು-ಗಂಡನ್ನು ಕೋಣೆಗೆ ಬಿಡಲು ಅಣಿ ಮಾಡಿದರು, ಸ್ವರೂಪ್ ಮತ್ತು ಸರೋಜ್ ಇಬ್ಬರೂ ಸ್ನೇಹಿತೆಯರು..

ಕೋಣೆಯತ್ತ ಮಲುಹಣ ಮಲುಹಣೆಯರು ಬರುತ್ತಿರಲು ಸ್ವರೂಪ್ ಸರೋಜ ಇಬ್ಬರೂ ಬಾಗಿಲ ಹತ್ತಿರ ಬಂದು ಅಡ್ಡ ಹಾಕ ಕೊಳ್ಳು ಅಣಿಯಾದರು. ತಮ್ಮಲ್ಲೇ ಮಾತನಾಡಿಕೊಳ್ಳಲಾರಂಭಿಸಿದರು.

"ಸ್ವರೂಪ್ ಹೇಗಿದೆ ಜೋಡಿ ?"

"ಬಹಳ ಚೆನ್ನಾಗಿದೆ"

"ಹಾಗಲ್ಲ...."

"ರತಿ -ಮನ್ಮಥರಂತೆ"

"ಅಲ್ಲ..."

"ಮತ್ತೆ..."

"ಸಕ್ಕರೆ ಮುಕ್ಕ"

"ಅಹೋ ಅದಾ...ಸದ್ಯ ಮಣ್ಮುಕ್ಕ ಅಲ್ಲ"

"ಹಾಲು ಮುಕ್ಕ ಅಲ್ಲ.."

"ಹೌದು ಸಕ್ಕರೆ ಮುಖವೇ" ಇಬ್ಬರೂ ಕಿಲಕಿಲನೆ ನಗುತ್ತಿರಲು ಮಲುಹಣ ಮಲುಹಣೆಯರು ಬಂದರು ಹತ್ತಿರಕ್ಕೆ. ಸರೋಜ್ ತುಂಟ ನಗುವನ್ನು ಬೆರೆಸಿ,

"ನಿನ್ನ ವರಿಸಿದವನ್ಯಾರು ಚಿನ್ನ.."

ಮಲುಹಣೆ ಔಡುಗಚ್ಚಿ ನಾಚಿದಳು. ಮಲುಹಣನು ಆಕೆಯನ್ನು ನೋಡಿ....

"ಏಕೆ ಹೇಳಿಬಿಡು ರತ್ನ ನಿನ್ನ ವರಿಸಿದವರ್ಯಾರು ಅಂತ ?"

ಸ್ವರೂಪ್

"ನೀವು ಹೇಳದೆ ಹೋದರೆ ನಾವು ಬಿಡಬೇಕಲ್ಲಾ ?"

"ಅಡ್ಡ ಹಾಕಿದ್ದಾರೆ ಹೇಳಿಬಿಡು ಮನದರಸಿ"

"ಮಲುಹಣದೇವ..."

"ಆಹಾ ನನಗೆ ಕೇಳಲೇ ಇಲ್ಲ..."ಸರೋಜ್.

"ನನಗೆ ಸ್ವಲ್ಪ ಕಿವುಡು" ಎಂದಳು ಸ್ವರೂಪ್.

"ನನಗೂ ಕೇಳಲೇ ಇಲ್ಲ ಮನದನ್ನೆಯೇ...?" ಎಂದ ಮಲುಹಣ.

ಸ್ವಲ್ಪ ಎತ್ತರದ ಧ್ವನಿಯಲ್ಲಿ

"ಮಲುಹಣ ದೇವ"

"ಏನೋ ಈಗ ಪರವಾಗಿಲ್ಲ, ಸ್ವಲ್ಪ ಕೇಳಿತು"

"ಇಲ್ಲ ಇನ್ನೊಂದು ಸಾರಿ ಜೋರಾಗಿ ಹೇಳಬಿಡು" ಎನ್ನಲು ಮಲುಹಣ.

ಸರೋಜ್.

"ಅವಳೇನೋ ಹೇಳಿದಳು, ಈಗ ನೀವೂ ಹೇಳಿಬಿಡಿ."

"ಎಷ್ಟು ಸಾರಿ ಹೇಳಲಿ ?"

"ಮಲುಹಣಿ ಎಂಬ ಮಂತ್ರವನ್ನೇ ಜಪಿಸಿ ಬಿಡ್ತೀರಾ ?"

"ಹೌದು, ಸಾವಿರ ಸಾರಿಯಾದ್ರೂ ಹೇಳ್ತೀನಿ ಕೇಳಿ, ಮಲುಹಣಿ....

"ಮಲುಹಣಿ"

"ಸಾಕು ಸ್ವಾಮಿ...ನೀವು ನಾಚಿಕೇನೇ ಮಾಡಿಕೊಳ್ಳುವುದಿಲ್ಲ"

"ಸರಿ ಬಿಡಿ.."

ಎನ್ನಲು ಇಬ್ಬರೂ ಒಳಹೋದರು ಇವರು ಬಿಡಲಿಲ್ಲ ಒಳಗೆ ಹೊರಟರು.

ಮಲುಹಣನು ಬೆಚ್ಚಿ

'ಮತ್ತೆ ಏಕೆ ಬಂದಿರಿ ?ಏನು ಬೇಕೋ ಅದನ್ನು ಹೇಳಿ ಆಯ್ತಲ್ಲ"

"ಈಗ ಅದಲ್ಲ"

"ಮತ್ತೇನು ?" ದಿಕ್ಕು ತೋಚದವನಂತೆ ನೋಡಿದ.

"ಈಗ ನಾವು ನಿಮ್ಮ ಹಾಸಿಗೆಗಳನ್ನು ಹಾಸಿದ್ದೇವೆ"

"ಅದಕ್ಕೆ ನಮ್ಮಿಬ್ಬರ ಧನ್ಯವಾದಗಳು"

"ನಮಗೆ ಬೇಕಾದುದು ಸಂಭಾವನೆ"

"ತೆಗೆದುಕೊಳ್ಳಿ ನೂರು ವರಹ"

"ಒಬ್ಬರಿಗಾಯಿತು, ಇನ್ನೊಬ್ಬರಿಗೆ ?"

"ಮತ್ತ ನೂರು ವರಹ" ಎಂದು ಕೊಡಲು

'ಮಲುಹಣೇ..' ಎಂದರು.

"ನಾನೇ ಆಕೆಯ ಪರವಾಗಿ ಕೊಟ್ಟಿರುವೆ"

"ಇಲ್ಲ ಅವರು ಕೊಡಬೇಕು"

ಮಲುಹಣೆ ನಗುತ್ತಾ...

"ಹಾಗಾಗಿದ್ದರೆ ನಾವೇ ಹಾಸಿಕೊಳ್ಳುತ್ತಿದ್ದೆವಲ್ಲಾ ?"

"ಹಾಗಿದ್ದರೆ ಶಾಸ್ತ್ರ ಸೂತ್ರಗಳೇಕೆ ? ಇಷ್ಟೊಂದು ಖರ್ಚು ಮಾಡಿ ಗೆಜ್ಜೆ ಪೂಜೆ ಏಕೆ ಮಾಡಬೇಕಾಗಿತ್ತು ?"

"ಅದೂ ಸರಿಯೇ ?"

"ಮತ್ತೆ ಅದಕ್ಕೇ ಈಗ ಕೊಡಲಿ ಬಿಡಿ ಮಲುಹಣೆಯವರು"

"ಬಿಡಬೇಡಿ...ನನಗಿಂತಲೂ ಹೆಚ್ಚು ಕೇಳಿರಿ" ಎಂದ ಮುಗುಳ್ನಗುತ್ತಾ ಮಲುಹಣ. ಮಲುಹಣೆ ಮುತ್ತಿನ ಹಾರಗಳನ್ನು ತೆಗೆದು ಸ್ವರೂಪ್‌ಗೊಂದು ಸರೋಜ್‌ಗೊಂದು ಕೊಟ್ಟಳು. ಸಂತಸದ ದನಿಯಲ್ಲಿ ಸ್ವರೂಪ್

"ನೋಡಿದಿರಾ ನಿಮಗಿಂತ ಹೆಚ್ಚನ್ನೇ ಕೊಟ್ಟರು."

"ನೀವು ಬರಿ ಪ್ರಚಂಡಿಗಳು"

"ನಾಳೆ ಕೇಳಲಿಕ್ಕಾಗುತ್ತದೆಯೇ ?"

"ಅದಕ್ಕೆ ಸಮಯ ಸನ್ನಿವೇಶಗಳನ್ನು ಕಾಯುತ್ತಿದ್ದರೆಂದು ತೋರುತ್ತದೆ"

"ಹೌದು..."

"ಸರಿ ಇನ್ನೇನಾದರೂ ಬೇಕೇ ?"

ಹೋಗುತ್ತೇವೆ. ಅಷ್ಟರತನಕ ಆತುರವೇ ? ನೀವಿಬ್ಬರೂ ಹಾಲು ಹಣ್ಣನ್ನು ತಿನ್ನುವುದಕ್ಕೆ ನೋಡಬೇಕು."

"ಅದಕ್ಕೇನಂತೆ" ಎಂದು ಒಂದು ತೊಟ್ಟು ಹಾಲನ್ನು ಕುಡಿದು ಆಕೆಯ ತುಟಿಗೂ ಇಟ್ಟು, ಹಣ್ಣನ್ನೂ ಬಾಯಿಗೆ ಇಟ್ಟರು.

ಸ್ವರೂಪ್, ಸರೋಜ್ ನಗುತ್ತಾ...

"ಸರಿ ಇನ್ನು ನಿಮ್ಮನ್ನುಹಿಂಸಿಸುವುದಿಲ್ಲ. ಇನ್ನು ಅವಳಿಗೆ ಹಿಂಸೆ ಕೊಡಿ. ಅವಳು ನಿಮಗೆ ಹಿಂಸೆ ಕೊಡಲಿ"

ಎಂದು ನಗುತ್ತಾ ಬಾಗಿಲನ್ನು ಭದ್ರವಾಗಿ ಹಾಕಿ ಓಡಿದರು.

ಅಂದು ಹೊರಗಡೆ ನೋಡಿದ್ದ ಮನೆಯನ್ನು ಇಂದು ಅವರ ಕಲಾತ್ಮಕ ಮನೆಯ ಒಳ ಅಂಗಳವನ್ನು ಪ್ರವೇಶಿಸಿದ. ಮಲುಹಣೆಯ ಕೋಣೆಯು ವಸಂತ ಮಾಸದ ಜೀವ ತಾಳಿದಂತಿತ್ತು. ಆತನ ಕೋಣೆಯನ್ನು ಒಂದು ಕೈ ಮೀರಿಸುವಂತಿತ್ತು. ಆತನ ಕೋಣೆ ಸಾಹಿತ್ಯ ಸೌರಭ ತುಂಬಿದ್ದರೆ, ಈಕೆಯ ಕೋಣೆ ಕಲೆಯ ಸೌಂದರ್ಯ ಸೂಸುತ್ತಿತ್ತು. ಹಂಸತೂಲಿಕಾತಲ್ಪವು ಘಮ ಘಮಿಸುವ ಹೂಗಳ ಹಾರದಿಂದ ಸಿಂಗರಿಸಿದ್ದವು. ಮೇಲ್ಪಾಸಿಗೆಗಳು, ಲೋಡುಗಳು ಒಂದೆಡೆ. ಅಲ್ಲಲ್ಲಿ ಲತೆಗಳು ಕಂಬವನ್ನು ಸುತ್ತಿ ಹೂ ಬಿಟ್ಟು ಕಂಗೊಳಿಸುತ್ತಿದ್ದವು. ಚಂದನ, ಕಸ್ತೂರಿ, ಪುನಗಿನ ಸುವಾಸನೆಯನ್ನು ಚೆಲ್ಲಿದ ಕೋಣೆಯು ಮೂಗಿಗೂ ಔತಣವನ್ನೀಯುವಂತಿತ್ತು. ಹೊರಗಿನ ಕಿಟಕಿಗ ಳಿಂದ ಸುಂದರವಾದ ಝೀಲಂ ನದಿಯ ದೃಶ್ಯ. ಮಾಟ ಗುಡ್ಡಗಳ ಮನೋಹರ ಚಿತ್ರ. ಹಸಿರು ಹಬ್ಬ ಕಣ್ಣಿಗೆ. ತೋಟಗಳ ಹೂವಿನ ರಾಶಿ. ಮಾಟ ಗುಡ್ಡಗಳಲ್ಲಿ ಮನೋಹರ ಗಿಡ ಮರಗಳು. ವಾದ್ಯದ ವಸ್ತುಗಳು ಮೂಲೆ ಮೂಲೆಗಳನ್ನು ಅಲಂಕರಿಸಿದ್ದವು. ವೀಣೆಯನ್ನು ಹಿಡಿದು ನಾದ ಹೊರಹೊಮ್ಮಿಸಿದಳು, ಮಲುಹಣನು ನೋಡಿದ ಕಂಗಳಷ್ಟೇ ಅಲ್ಲ, ಕಿವಿಗಳೂ ಇಂಪಾಯಿತು. ಅದರಲ್ಲೇ ತಲ್ಲೀನನಾದ. ಅದರ ನಾದ ನಿಂತಕೂಡಲೇ...

"ಏಕೆ ಮುಂದುವರಿಸು ಷೋಡಶಿ. ಇಂದು ನಿಜವಾದ ಮೊದಲ ರಾತ್ರಿಯನ್ನು ಅನುಭವಿಸಬೇಕಾದ ನಾವು ಸಂಗೀತ ನೃತ್ಯದಲ್ಲಿ ನಲಿದಾಡ ಬೇಕು."

ಲಜ್ಜೆಯಿಂದ ಕಾದ ಕೆನ್ನೆ ಕೆಂಪಾಯಿತು. ಮತ್ತೆ ಮನೋಹರವಾಗಿ ನುಡಿಸಲಾರಂಭಿಸದಳು. ಸತತವಾಗಿ ನುಡಿಸಲು ಮೊಗದಲ್ಲಿ ಬೆವರ ಹನಿಗಳು ಜನ್ಮಿಸಿದವು. ಅದನ್ನು ಗಮನಿಸಿದ ಮಲುಹಣ..

"ಸಾಕು ಮಲುಹಣೇ...ಹೆಚ್ಚಿಗೆ ಶ್ರಮ ತೆಗೆದುಕೊಳ್ಳಬೇಡ. ಕೇಳುವ ದಿನಗಳು ಇನ್ನೂ ಬೇಕಾದಷ್ಟಿವೆ" ಎನ್ನಲು ನಿಲ್ಲಿಸಿ ತನ್ನ ಸೆರಗಿನಲ್ಲಿ ಮೆಲ್ಲನೆ ಮುಖಾರವಿಂದವನ್ನು ಒರೆಸಿಕೊಂಡು, ವೀಣೆಯನ್ನು ಅದರ ಸ್ಥಾನಕ್ಕೆ ಇಟ್ಟಳು.

ಕೋಣೆಯ ಒಂದೆಡೆ ಹಾಲು-ಹಣ್ಣು ಸವಿ ಭಕ್ಷ್ಯ ಭೋಜ್ಯಗಳು ಅಣಿಯಾಗಿದ್ದವು. ಅದನ್ನು ಕೊಡುವ ಬಯಕೆ ಆಕೆಗಾಯಿತು. ಮೆಲ್ಲನೆ ಬಂದು ಆಕೆಯ ಪಕ್ಕದಲ್ಲಿ ಕುಳಿತು, ದೈನ್ಯದ ದೃಷ್ಟಿಯಿಂದ ಆತನನ್ನು ನೋಡಿ ಔಡುಗಚ್ಚಿದಳು. ಅಂಜಿಕೆ, ನಾಚಿಕೆ, ಅಳುಕು, ಬೆವರು, ಕಂಪನ, ಪುಳಕ, ಒಂದರ ಮೇಲೊಂದಾಗ ಮತ್ತಷ್ಟು ಕೆಂಪಾಗಿ ದಿಕ್ಕು ತೋಚದ ಎರಳೆಯಂ ತಾದಳು.

"ಮಲುಹಣೇ..." ಎಂದ ನುಣ್ದನಿಯಲ್ಲಿ..

ಮಲುಹಣೆಗೆ ಮಾತನಾಡಬೇಕೆಂದಿದ್ದರೂ ಮಾತು ಬರಲಿಲ್ಲ. ಗದ್ಗ ಬಿಗಿಯಿತು.

ಮಲುಹಣ ಮತ್ತೆ ತನ್ನ ಮಾತನ್ನು ಮುಂದುವರಿಸುತ್ತಾ.

"ನಮ್ಮಿಬ್ಬರ ನಾಮಕರಣವನ್ನು ಆ ವಿಜಯೇಶ್ವರನೇ ಮಾಡಿದನೋ, ಏನೋ ಆದುದರಿಂದಲೇ ನಮ್ಮಿಬ್ಬರ ಸಮ್ಮಿಲನ ಇಂದಾಗಿ, ನಿನಗಾಗಿ ನಾನು ಹುಟ್ಟಿದೆ."

"ಹೌದು" ಎಂದಳು ಮೆಲ್ಲನಿಯಲ್ಲಿ.

ಸ್ವಲ್ಪ ಚೇತನ ತುಂಬಿದ ಆಕೆ ಹಾಲು-ಹಣ್ಣನ್ನು ತೆಗೆದುಕೊಂಡು ನೀಡಿದಳು. ಮಾತಿಲ್ಲದೆ, ಆತನೂ ಸ್ತಬ್ಧನಾದನು. ಇಂಚರದ ದನಿಯಲ್ಲಿ ಉಲಿದಳು.

" ಈ ಸವಿ ಹಾಲು, ರಸ ತುಂಬಿದ ಹಣ್ಣುಗಳನ್ನು ತೆಗೆದುಕೊಳ್ಳಿ"

"ಷೋಡಶಿ ನಿನ್ನಂಗಾಂಗ ಸೌಂದರ್ಯವನ್ನೇ ನೋಡಿ ಹೊಟ್ಟೆ ತುಂಬಿರುವಾಗ ಭಕ್ಷ್ಯ ಭೋಜ್ಯಗಳಲ್ಲಿ ರುಚಿ ತರಬೇಕು ?"

"ಹೌದು ನಿಮ್ಮ ಮೊದಲನೆಯ ದಿನದ ನೋಟವೇ ನನಗೆ ಹೊಟ್ಟೆ ತುಂಬಿಸಿತ್ತು"

"ಹೌದು..ನಿನ್ನ ಎರಡನೆಯ ದಿನದ ಸ್ಪರ್ಶವೇ ನನಗೆ ಏನೂ ಬೇಡ ವೆನಿಸಿತ್ತು"

"ಆದರೆ ಇಂದು ಆ ವೈಯ್ಯಾರಿಯ ಕೈಯಿಂದ ತಿನ್ನಬಾರದೇ ?"

"ಅಷ್ಟೊಂದು ಪ್ರೀತಿಯಿಂದ ಕೊಡುವೆಯಾದರೆ ಬೇಡ ಎನ್ನ ಲಾಗುತ್ತದೆಯೇ ?" ಎಂದಾಗ ಆಕೆಗೆ ಹೃದಯ ತುಂಬಿ ಬಂತು, ಸಿಹಿ ತಿಂಡಿಯನ್ನು ಬಾಯಿಗೆ ನೀಡಿದಳು. ಆತನು ಒಂದು ಚೂರು ತೆಗೆದುಕೊಂಡು ಬಾಯಿಗೆ ಹಾಕಿದನು.

ಆಕೆ ಅದರಲ್ಲಿ ಸ್ವಲ್ಪ ಕಡಿದುಕೊಂಡಳು. ಆದರೆ ಮಲುಹಣ ಆಕೆಯ ಬೆರಳನ್ನೇ ನುಂಗುವವನಂತೆ ಕಚ್ಚಿದ, ಆಕೆ 'ಹಾಯ್' ಎನ್ನುತ್ತಾ

"ನಿಮಗೆ ಕೊಟ್ಟಿದ್ದು ಸಿಹಿ ತಿಂಡಿ ಮಾತ್ರ, ಬೆರಳುಗಳನ್ನಲ್ಲ"

"ನನಗೆ ಕೊಟ್ಟಿದ್ದು ಎರಡರ ಸಹಿತ. ಆದುದರಿಂದ ಎರಡೂ ಇರಬಹುದು ಎಂದು ತಿಳಿದೆ"

"ಮನುಷ್ಯರನ್ನೂ ಮನುಷ್ಯರು ತಿನ್ನುವುದಿಲ್ಲ, ಯಾವಾಗಲೂ."

"ಆದರೆ ನಿನ್ನ ಸಿಹಿ ತಿಂಡಿಗಿಂತ ನಿನ್ನ ಸಿಹಿ ಬೆರಳು ಚೆನ್ನಾಗಿತ್ತು"

"ನಿನ್ನನ್ನು ನೋಡಿದ ಮೊದಲ ದಿನದಿಂದಲೂ, ನಿನ್ನನ್ನು ಸ್ಪರ್ಶ ಮಾಡಿದಂದಿನಿಂದಲೂ ನಿನ್ನ ಅಂಗ ಸಂಗವಿರಬೇಕು ಎಂದು ಬಯಸಿದ್ದೆ"

ಎಂದು ಪಕ್ಕಕ್ಕೆ ಕುಳಿತನು. ಕೂಡಲೇ ಆಕೆಗೆ ರೋಮಾಂಚನವಾಯಿತು. ದೇಹ ದಲ್ಲಿ ರಕ್ತ ಸಂಚಾರ ತೀವ್ರವಾಯಿತು. ಸವಿದೋಳನ್ನು ಹಿಡಿದು ತನ್ನ ಹಣೆಯಿಂದ ಆಕೆಯ ಹಣೆಗೆ ತಾಗಿಸಿದನು. ಮೆಲ್ಲನೆ ಸವಿಗಲ್ಲವನ್ನು ಹಿಡಿದೆತ್ತಿ ಆಕೆಯ ಸೌಂದರ್ಯ ವನ್ನು ಕಂಗಳಿಂದ ಹೀರಿದನು. ತುಟಿಗಳಲ್ಲಿ ಸೋರುವ ಅಮೃತವನ್ನು ನೋಡಿ ದುಂಬಿಯಾದನು. ಆಕೆಯ ಎದೆಯನ್ನು ಅಪ್ಪಿಕೊಂಡು ಮತ್ತೆ ತುಟಿಗಳ ಬಯಕೆಯನ್ನು ತೀರಿಸಿನು, ಅಂಗಾಂಗಕ್ಕೆ ನಕ್ಷತ್ರೆಯಿಕ್ಕಿದನು. ಹೊರಗಿನ ಚಂದ್ರನ ಬೆಳದಿಂಗಳು, ಹಲ್ಲುಗಳ ಚೆಲುವು, ಅದರ ಜತೆಗೆ ಮಲುಹಣೆಯ ಸೌಂದರ್ಯವನ್ನು ಹೀರಿದ. ಕೋಣೆಯಲ್ಲಿನ ಚಿಮಣಿ ದೀಪವನ್ನು ಸಂಪೂರ್ಣ ನಂದಿಸಿ, ಅಂಗಾಂಗ ಸುಖವನ್ನು ಚಕೋರ ಪಕ್ಷಿಗಳಂತೆ ಇಬ್ಬರೂ ಸವಿದರು. ಹಿಂದಿನ ಕನಸು ಇಂದು ನನಸಾಗಿ ಇಬ್ಬರೂ ರತಿ ಸುಖವನ್ನು ಪಡೆಯಲು ಅನುವಾದರು. ಮೊದಲ ರಾತ್ರಿಯ ಸುಖ ಮತ್ತೆ ಮತ್ತ ಬೇಕೆನಿಸಿತು ಮಲುಹಣ ಮಲುಹಣೆಯರಿಗೆ. ಬೆಳಿಗ್ಗೆ ಎದ್ದು ವಿವಸ್ತ್ರಳಾದ ಆಕೆಯ ದಷ್ಟ ಪುಷ್ಟ, ಅಂಗ ಸೌಷ್ಠವವು ಮಲುಹಣನಿಗೆ ಹೊಸ ನೋಟ ಒದಗಿಸಿತು. ಅದನ್ನು ಗಮನಿಸಿ ಹೊದಿಗೆಯನ್ನು ಹೊದಿಸಿದ ಕೂಡಲೇ ಎಚ್ಚೆತ್ತು ಆಕೆ ನಾಚುತ್ತಾ ಸಾವರಿಸಿಕೊಂಡಳು.



ಶುಕ್ರವಾರ ಎಂಬುದನ್ನೂ ನೋಡದೇ ಬಟ್ಟೆ ಬರೆಗಳು ಆಭರಣಗಳನ್ನೆಲ್ಲಾ ಪೆಟ್ಟಿಗೆಗಳಲ್ಲಿ ತುಂಬಿಕೊಂಡು ಮಲುಹಣೆಯ ಮನೆಯತ್ತ ಬಂದ. ಪೆಟ್ಟಿಗೆಯಿಂದ ಆಭರಣಗಳನ್ನು ಸುರಿದುದನ್ನು ನೋಡಿದ ಮಲುಹಣೆ...

"ಇದೇನು ಆಭರಣದ ಮಳೆಯನ್ನೇ ಕರೆಯುವಂತಿದೆಯಲ್ಲಾ ?"

"ಹೌದು ಇದೋ ನೋಡು, ನಮ್ಮ ತಂದೆ ನನಗೆ ಮದುವೆ ಮಾಡಿ ಸೊಸೆಗೆ ಹಾಕಿ ಸಂತೋಷ ಪಡಬೇಕೆಂದಿದ್ದರು. ಆದರೆ ಅದು ಈ ಜನ್ಮದಲ್ಲಿ ಮದುವೆಯಾಗಲು ಸಾಧ್ಯವಾಗಲಿಲ್ಲ "

ಎನ್ನುತ್ತಾ ಕಂಗಳಲ್ಲಿ ನೀರು ತುಂಬಿಕೊಂಡ. ಮಲುಹಣೆಗೂ ಸಹ ಪ್ರತಿಕ್ರಿಯಿಸಿತ್ತು.

"ಇದೇಕೆ, ನನಗೆ ದುಃಖ ಬಂದು ಅತ್ತರೆ ನಿನಗೇನಾಯಿತು ?"

"ನಾನು ನನ್ನ ಜೀವನದಲ್ಲಿ ಮದುವೆಯನ್ನು ಅಗ್ನಿಸಾಕ್ಷಿಯಾಗಿ ಶಾಸ್ತ್ರೋಕ್ತವಾಗಿ ಆಗಬೇಕೆಂದಿದ್ದೆ. ಆದರೆ ತಾಯಿಯ ಮಾತಿಗೆ ಕಟ್ಟು ಬಿದ್ದೆ"

"ಹಾಗಾದರೆ ನಿನಗೆ ಗೆಜ್ಜೆಪೂಜೆ ಸಮ್ಮತವಿರಲಿಲ್ಲವೇ ?"

"ನಾನು ಮದುವೆಗೆ ಆಶಿಸಿ ಪತಿವ್ರತೆಯಾಗಿ ಬಾಳಬೇಕೆಂದಿದ್ದೆ. ಆದರೆ ನಮ್ಮ ಕುಲಧರ್ಮವೆಂದು ತಾಯಿ ನನಗೆ ಗೆಜ್ಜೆಪೂಜೆ ಮಾಡಿದರು."

"ನಾನೂ ಮದುವೆಯಾಗುವುದಿಲ್ಲ ಎಂದು ಶಪಥ ಮಾಡಿದ್ದುದರಿಂದಲೇ ನಿನ್ನನ್ನು ವರಿಸಿದುದು."

"ಏಕೆ....?"

"ನಮ್ಮ ತಂದೆ ನನಗೆ ವಿಜೃಂಭಣೆಯಿಂದ ಮದುವೆ ಮಾಡಬೇಕೆಂದಿದ್ದರು. ಆದರೆ ಅವರು ಅಷ್ಟು ಬೇಗನೆ ಕೈಲಾಸವಾಸಿಯಾದುದರಿಂದ ನನ್ನ ಮನಸ್ಸು ಮದುವೆಗೆ ಒಪ್ಪದೆ ಶಪಥ ಮಾಡಿತು. ಅದಕ್ಕೋಸ್ಕರವೇ ನಿನ್ನನ್ನು ಈ ಗೆಜ್ಜೆಪೂಜೆಯಲ್ಲಿ ಒಪ್ಪಿದುದು."

ಮೊಗದಲ್ಲಿ ಸಂತೋಷ ಲಾಸ್ಯವಾಡಿತು ಮಲುಹಣೆಗೆ, ಮತ್ತೆ ಸಂತಸದ ದನಿಯಲ್ಲಿ ಮುಂದುವರಿಸಿದಳು ತನ್ನ ಮಾತನ್ನು

"ಎಲ್ಲಾ ವಿಧಿಯ ವೈಚಿತ್ರ್ಯವೇ ಸರಿ. ಗೆಜ್ಜೆಪೂಜೆಯಾದರೂ, ನಾನು ವೇಶ್ಯಾಕುಲದಲ್ಲಿ ಬೆಳೆದವಳಾದರೂ ನಾನು ಪತಿವ್ರತೆಯಾಗಿ ನಿಮ್ಮನ್ನೇ ನಂಬಿ ನೆಚ್ಚಿ ಪತಿಯೆಂದು ಪೂಜಿಸುವೆ"

"ಬಹಳ ಸಂತೋಷ ಮಲುಹಣೇ....ಬಹಳ ಸಂತೋಷ" ಎನ್ನುತ್ತಿದ್ದಂತೆಯೇ ಕಂಗಳ ನೀರನ್ನು ತೊಡೆದುಕೊಂಡು ಮತ್ತೊಂದು ಪೆಟ್ಟಿಗೆಯನ್ನು ತೆಗೆದು ಜರತಾರಿ ಬಟ್ಟೆಗಳನ್ನು ಸುರಿಯುತ್ತಾ...

"ಇದು ನಿಮ್ಮ ತಾಯಿಗೆ, ಈ ಕಡಗಗಳು, ಮುತ್ತಿನಹಾರ, ಈ ಆಭರಣಗಳೆಲ್ಲಾ ನಿನ್ನವೇ ಎಂದು ತೆಗೆದು ಹಾಕುತ್ತಿರಲು ಆ ದನಿ ಕೇಳಿದ ಪದ್ಮಾವತಿ ಮಹಡಿಯ ಮೇಲಕ್ಕೆ ಓಡಿ ಬಂದು..

"ಏನು ಮಲುಹಣದೇವರು ?" ಎಂದಳು ನಾಚಿದ ದನಿಯಲ್ಲಿ.

"ಇದು ನಿಮಗೆ.."

ಎನ್ನಲು ಸಂತೋಷ ಉಕ್ಕಿ ಕೈಗಳಿಂದ ಎತ್ತಿ ಕಣ್ಣರಳಿಸಿ ನೋಡಿ ತನ್ನ ಸೆರಗಿಗಿ ತುಂಬಿಕೊಂಡು..

"ಹ್ಞಾಂ...ಎಂಥ ಹೃದಯವಪ್ಪ ನಿನ್ನದು, ನೀನು ಮಲುಹಣೆಯೊಬ್ಬಳಿಗೆ ಕೊಡುವೆಯೆಂದು ತಿಳಿದುಕೊಂಡಿದ್ದೆ. ಆದರೆ ಆಕೆಯನ್ನು ಹೆತ್ತ ತಾಯಿಯನ್ನು ಗಮನಿಸಿ, ಮರೆಯದೆ ಕೊಡುತ್ತಿರುವುದು, ನನ್ನ ಸಂತೋಷವನ್ನು ಹೆಚ್ಚಿಸಿದೆ"

ಎಂದು ಬಟ್ಟೆಗಳು, ಆಭರಣಗಳನ್ನು ಎತ್ತಿಕೊಂಡು ಹಜಾರದತ್ತ ಓಡಿ ಬಂದಳು.

"ಎಷ್ಟೊಂದು ಆಸೆ ಆ ಮುದಿಕಿಗೆ " ಎಂದು ನಕ್ಕಳು ಮಲುಹಣೆ. ಮಲುಹಣನು ಮರುನಕ್ಕನು, ಮತ್ತೆ ಆಕೆಯು ಮುಖ ತಿರುಗಿಸಿ

"ನಿನ್ನದನ್ನು ತೆಗೆದುಕೋ, ನೀನು ತೋರಿಸಲು ಓಡಲೇ ಇಲ್ಲ"

"ನನಗೆ ಈ ಆಭರಣಗಳಾವುವೂ ಹಿಡಿಸಲಿಲ್ಲ"

"ಏಕೆ....?"

"ನೀವೇ ನನಗೆ ಸರ್ವಸ್ವ, ನೀವೇ ಒಂದು ರತ್ನವಾಗಿರುವಾಗ ಮತ್ತಾವ ರತ್ನ ನಿಮಗೆ ಸಾಟಿ?"

ಮಲುಹಣನಿಗೆ ಆಕೆಯ ಮಾತು ಅಮಿತಾನಂದ ತಂದಿತ್ತು.

"ರತಿಯಂಥ ನೀನಿರುವಾಗ ಈ ಐಶ್ವರ್ಯ ಕಡೆ"ಮಾರುತ್ತರವಿತ್ತ.

"ಮನ್ಮಥನಂಥ ನೀವಿರುವಾಗ ನನಗೆ ಈ ಪ್ರಪಂಚದಲ್ಲಿ ಇನ್ನಾವುದೂ ಇಲ್ಲ"

"ಆದಕ್ಕೆ ಈ ರತಿ ಮನ್ಮಥರನ್ನು ಒಂದಾಗಿ ಸೇರಿಸಿದ್ದು"

" ಈ ಹಂಸತಲಿಕಾತಲ್ಪದಲ್ಲಿ, ನವೋದಯ ಕಾಲದಲ್ಲಿ ಆಡಿದ ಮಾತುಗಳೇ ಸ್ಥಿರವಾಗಿ ನಿಲ್ಲಲಿ, ಎಂದು ಹಾರೈಸುತ್ತೇನೆ."

"ನನಗೂ ಹಾಗೆಯೇ ಅನ್ನಿಸುತ್ತದೆ. ಇದು ಸತ್ಯ, ನಿತ್ಯ ಶಾಶ್ವತ ಎಂದು. ಈ ಸೂರ್ಯ ಚಂದ್ರ ನಕ್ಷತ್ರಗಳು ಆಗಸದಲ್ಲಿರುವವರೆಗೆ ನಮ್ಮ ಪ್ರೀತಿಯೂ ಶಾಶ್ವತವಾಗಿ ಉಳಿಯಬೇಕು, ಆದರ್ಶವಾಗಬೇಕು ಎಂಬುದೇ ನಮ್ಮ ಸಂಕಲ್ಪ"

"ನನ್ನ ಉಸಿರಿರುವ ತನಕಲೂ ಇದು ನಿರಂತರವಾಗಿರಬೇಕು ಎಂಬುದು ನನ್ನ ಧ್ಯೇಯ"

"ನನ್ನ ಪ್ರೀತಿಯ ಸರ್ವಸ್ವವನ್ನೂ ನಿನಗೆ ಧಾರೆ ಎರೆದಿರುವೆ. ನನ್ನ ಪ್ರೇಮದ ಎರಕವನ್ನು ನಿನ್ನ ಪ್ರೇಮದ ಅಚ್ಚಿಗೆ ಹೊಯ್ದಿದ್ದೇನೆ. ನನ್ನ ಐಸಿರಿಗೆಲ್ಲ ನೀನೇ ಅಧಿದೇವತೆ, ಸಾಕ್ಷಾತ್ ಲಕ್ಷ್ಮಿ."

"ದೊಡ್ಡವರು ಹೇಳುತ್ತಾರೆ ಹೆಣ್ಣಿನ ಹೃದಯ, ತಣ್ಣಗಿರುವ ನೀರು, ಕುದುರೆಯ ನಿಲುವನ್ನು ಕಂಡಿರುವವರಾರು ಎಂದು"

ಚಿಗುರು ನಗುವಿನಿಂದ....

"ಅದು ನನ್ನ ಭಾಗಕ್ಕೆ ಇಲ್ಲವೆಂದು ತಿಳಿಯಿರಿ"

"ಸಮುದ್ರದ ಹಾಡನ್ನೂ, ಮೋಡಗಳ ತಾಕಾಟವನ್ನೂ ಸ್ತ್ರೀಯರ ಮಹಿಮೆಯನ್ನೂ ಅರಿತವರಾರು ?"

"ಜಗತ್ತಿನ ಹುಟ್ಟುವಿಕೆಗೆ ಕಾರಣನಾದ ಶಿವನೇ ತನ್ನ ಅರ್ಧ ದೇಹವನ್ನು ಪಾರ್ವತಿಗರ್ಪಿಸಿದನು. ಇನ್ನು ಮಿಕ್ಕವರ ಮಾತೇನು ಬಿಡಿ.."

"ಸಾಕು..."

"ತಪ್ಪಾಯ್ತು..."

"ಅದಕ್ಕೆ ಏನಾದರೂ ಕಾಣಿಕೆ ಕೊಡಬೇಕೇ? ಹತ್ತಿರ ಬಾ ಕೊಡುತ್ತೇನೆ" ಎಂದು ಬರಸೆಳೆದುಕೊಳ್ಳಲು,

"ಓಹೋ..ಇದಕ್ಕಾ ?" ಎಂದು ಕಿಲಕಿಲನೆ ನಕ್ಕಳು. ದೀಪವನ್ನು ಆರಿಸಿ ಆಕೆಯ ಅಂಗ ಸವಿಯನ್ನು ಸವಿದ.

❋ ❋ ❋ ❋ ❋ ❋ ❋ ❋ ❋ ❋

ಅಂದು ಸೂರ್ಯೋದಯದ ವೇಳೆ, ತೋಟದಲ್ಲಿ ಬೆಳೆದಿದ್ದ ಸೇಬಿನ ಹಣ್ಣನ್ನು ಮಲುಹಣೆ ಜೊತೆಗಾರ್ತಿಯರ ಜೊತೆ ಬಿಡಿಸುತ್ತಿದ್ದಾಳೆ.

ದಪ್ಪ ಸೇಬೊಂದನ್ನು ಕಿತ್ತು ಸರೋಜ್...

"ಇದು ನಿನ್ನವರಿಗೆ ಕೊಟ್ಟರೆ ಹಿತವಾಗಿರುತ್ತದೆ ತೆಗೆದುಕೋ"

"ನಿನ್ನ ಸಂತೋಷ ..ಕೊಡುತ್ತೇನೆ ಕೊಡು" ಎಂದು ತೆಗೆದುಕೊಂಡು ಮನೆಯ ಒಳಗಡೆ ಹೋಗುವಷ್ಟರಲ್ಲೇ ಮಲುಹಣನು ಮಹಡಿಯನ್ನು ಹತ್ತಿರುವುದು ಕಂಡಿತು. ಹಣ್ಣನ್ನು ತೆಗೆದುಕೊಂಡು ಓಡಿದಳು. ಆಕೆಯನ್ನುದ್ದೇಶಿಸಿ,

"ಮಲುಹಣೇ..ಏನು ನಿನ್ನ ಅವತಾರ ?" ಎಂದ ಮುಗುಳ್ನಗೆ ಬೀರಿ,

"ತೋಟದಲ್ಲಿ ಹಣ್ಣು ಕೀಳುತ್ತಾ ಇದ್ದೆ."

"ನಿನಗೆ ಸ್ವಲ್ಪವೂ ಬೇಸರವಾಗುವುದಿಲ್ಲವೇ ?"

"ಏಕೆ....?"

"ಸುಮ್ಮನೆ ಒಬ್ಬಳೇ ಮನೆಯಲ್ಲಿ ಕುಳಿತು ಕಾಲ ಕಳೆಯುವುದಕ್ಕೆ "

"ಜೊತೆಗೆ ನೀವಿರುತ್ತೀರಲ್ಲಾ ?"

"ಆದರೆ ಪ್ರಕೃತಿಯ ಮಧ್ಯ ಕಾಲ ಕಳೆಯುವ ಆಸೆಯಿಲ್ಲವೇ ?"

"ಇದೆ...ಬಾ ಎಂದು ಕರೆಯುವವರ್ಯಾರು ?"

"ನಾನು"

"ಕಾಶ್ಮೀರದ ಪ್ರಕೃತಿಯನ್ನು ನೋಡಲು ಬೇರೆ ಬೇರೆ ರಾಜ್ಯಗಳಿಂದ, ದೇಶಗಳಿಂದ ಜನರು ಬರುತ್ತಾರೆ. ಆದರೆ ನೀನು ಇಲ್ಲೇ ಇದ್ದು ಅದನ್ನು ಸವಿಯುವುದಿಲ್ಲ ಎಂದು ಹೇಳುತ್ತಿರುವುದು ಆಶ್ಚರ್ಯ."

"ಪ್ರಕೃತಿಯ ನಡುವೆ ಇರುವವರೆಗೆ ಅದರ ಪರಿವೆಯೇ ಇರುವುದಿಲ್ಲ."

"ನೀವಾದರೂ ಪ್ರಕೃತಿ ಕವಿ. ತಿರುಗಾಡುತ್ತೀರಿ ? ನಾವು ಎಷ್ಟೇ ಆದರೂ ಹೆಂಗಸರು.."

"ಸರಿ ಸಾಯಂಕಾಲ ಹೊರಡೋಣ ಮಧುಚಂದ್ರಕ್ಕೆ"

ಎಂದು ಹೊರಟ ಸ್ನಾನಕ್ಕೆ.

ಸಾಯಂಕಾಲ ಮಲುಹಣೆ ಕಾಶ್ಮೀರದ ಉಡುಗೆಯಿಂದ ಸಿಂಗರಿಸಿ ಕೊಂಡು ಅಣಿಯಾಗಿ ಕುಳಿತಿದ್ದಳು. ಮಧುಚಂದ್ರಕ್ಕಾಗಿ ಝೀಲಂ ನದಿಯ ಹತ್ತಿರ ಬಂದರು ದಂಪತಿಗಳು. ಪಕ್ಕದ ಸರೋವರದಲ್ಲಿ ದೋಣಿಗಳು ವಿಹಾರಿಗಳಿಗೆ ಅಣಿ ಮಾಡಿತ್ತು. ಅದನ್ನು ನೋಡಿದ ಮಲುಹಣೆ..

"ನಾವೂ ಹೋಗೋಣವೇ ?"

"ಓಹೋ..ಅದಕ್ಕೇನಂತೆ ಹೋಗೋಣ ನಡೆ" ದೋಣಿಯನ್ನು ಹತ್ತಿ ಒಂದು ಸುತ್ತು ಸುತ್ತಿ ಇಕ್ಕೆಡೆಗಳಲ್ಲಿ ಪ್ರಕೃತಿಯನ್ನು ಕಣ್ದಣಿಯೆ ನೋಡಿ ಹರ್ಷಚಿತ್ತರಾದರು. ದೋಣಿಯು ಗಾಳಿಗೆ ಓಲಾಡಲು ಮಲುಹಣೆ ಮಲುಹ ಣನನ್ನು ಅಪ್ಪಿಕೊಂಡಳು. ಕೂಡಲೇ ಆಕಸ್ಮಿಕವಾಗಿ ತುಟಿಗಳಿಗೆ ತುಟಿಗಳು ಸೇರಿದವು.

"ಯಾವಾಗಲೂ ನಿಮಗೆ ಇದೇ.." ಎಂದು ತಟಕ್ಕನೇ ಕೈ ಬಿಟ್ಟಳು. ರುಚಿಯನ್ನು ಸವಿದ ಮಲುಹಣ ನಕ್ಕ.

"ಏಕೆ ಹೀಗೆ ನಗುತ್ತಿದ್ದೀರಿ ?"

"ನಾನು ಸಣ್ಣವನಾಗಿದ್ದಾಗ ಯಾರ ಎಂಜಲನ್ನು ತಿನ್ನುವುದಿಲ್ಲ ಎಂದು ಅಜ್ಜಿಗೆ ಹೇಳುತ್ತಿದ್ದೆ ಮತ್ತು ಕಟ್ಟುನಿಟ್ಟಾಗಿದ್ದೆ. ಅದಕ್ಕೆ ಅವ ರೆನ್ನುತ್ತಿದ್ದರು ಇನ್ನೆಷ್ಟು ದಿನಗಳ ತನಕ ಹಾಗೇ ನೋಡುತ್ತಿರು, ಮದುವೆ ಆದಮೇಲೆ ಆತನ ಹೆಂಡತಿಯ ಎಂಜಲು ತಿನ್ನುತ್ತಾನೆ ಎನ್ನುತ್ತಿದ್ದರು. ಆಗ ನನಗರ್ಥವಾಗದೆ "ಅದೆಲ್ಲಾ ಬರೇ ಸುಳ್ಳು" ಎಂದು ಸುಮ್ಮನಾಗುತ್ತಿದ್ದೆ. ಆದರೆ ಇಂದು ಅವರು ಹೇಳಿದ್ದೆಲ್ಲಾ ಸರಿ ಎಂದು ನನಗರ್ಥವಾಯಿತು."

"ಅವರು ಹೇಳಿದ್ದು ಸರಿಯಾಯ್ತಲ್ಲ" ಎಂದು ಕಿಲಕಿಲನೆ ನಕ್ಕಳು. ಇಬ್ಬರೂ ಮಾತಾಡುತ್ತಿದ್ದಂತೆಯೇ ದೋಣಿಯು ಮತ್ತೊಂದು ದಡವನ್ನು ಮುಟ್ಟಿತು. ಕೂಡಲೇ ಇಳಿದು ಒಂದು ಚಿನ್ನದ ನಾಣ್ಯವನ್ನು ಕೊಟ್ಟು ಮಂಜಿನ

ಮಲೆಯತ್ತ ಹೊರಟರು. ಹಸಿರು ಮರಗಳು ಅವರಿಗೆ ಕಿರೀಟದಂತೆ ಶೋಭಿಸುತ್ತಿದ್ದವು. ಮಲುಹಣೆಯ ಅಂದಿನ ಹಸಿರು ಉಡುಗೆ ತೊಡಿಗೆ ಆಭರಣಗಳೂ ಮಲುಹಣನ ಗುಲಾಬಿ ಬಣ್ಣದ ಬಟ್ಟೆಗಳು ಅತ್ಯಂತ ಆಕರ್ಷಕವಾಗಿ ಕಂಡವು. ಮಂಜಿನಲ್ಲಿ ಜಾರುಗುಪ್ಪೆಯಾಡಿದರು. ಹೊರಳಾಡಿದರು. ಮೇಲಿಂದ ಹಿಮ ಬೀಳುತ್ತಿರಲು ಮಲುಹಣೆ ಮಲುಹಣನ ಹತ್ತಿರ ಬಂದಳು. ಆಕೆಗೆ ಚಳಿಯಾಗಬಹುದೆಂದು ಹಾಗೆಯೇ ಅಪ್ಪಿಕೊಂಡು ಗಲ್ಲದ ಸವಿಯುಂಡ. ದೇಹದ ಅಪ್ಪುಗೆ ಜತೆಯ ಚುಂಬನವು ಆಕೆಗೆ ಹಿತವೆನಿಸಿ ತುಸು ಹೊತ್ತು ಬಳ್ಳಿಯು ತರುವನ್ನು ಅಪ್ಪಿಕೊಳ್ಳುವಂತೆ ಅಪ್ಪಿಕೊಂಡಳು. ಸ್ವಲ್ಪ ಹೊತ್ತಾದ ಮೇಲೆ ಬೇರ್ಪಟ್ಟು...

"ಬಹಳ ಚಳಿಯಾಗುತ್ತಿದೆಯಲ್ಲವೇ...ಮಲುಹಣೇ ?"

"ಹೌದು" ಎಂದು ನಾಚಿ ತಲೆ ತಗ್ಗಿಸಿದಳು.

"ಹಾಗಾದರೆ ಮನೆಗೆ ಹೋಗೋಣವೇ ?"

"ಹಾಗೇ ಅಡ್ಡಾಡುತ್ತಾ ಹೋಗುವುದರಲ್ಲಿ ಚಂದ್ರ ಮುಳುಗುತ್ತಾನೆ ಹೋಗೋಣ" ಎಂದು ಬಂಧನದಿಂದ ಬಿಡಿಸಿಕೊಂಡಳು. ಆಕೆಯ ತಲೆಯ ಮೇಲೆ ಮಂಜಿನಿಂದ ಚೆಲ್ಲಾಟವಾಡಿದ ಚೂರುಗಳು ಉಳಿದಿದ್ದವು. ಅದನ್ನೆಲ್ಲಾ ಕೈ ಬೆರಳುಗಳಿಂದ ತೆಗೆದ. ಆಕೆಯೂ ಆತನ ಬಟ್ಟೆಗಳಿಗೆ ಅಂಟಿಕೊಂಡಿದ್ದ ಮಂಜಿನ ಚೂರುಗಳನ್ನು ಒದರಿಸಿದಳು. ಕೈಗಳ ಬೆರಳುಗಳು ಬೆರಳುಗಳನ್ನು ಭದ್ರವಾಗಿ ಒಂದನ್ನೊಂದು ಬಂಧಿಸಿ ಹಿಡಿದವು. ಇಬ್ಬರೂ ಅಲ್ಲಿಂದ ಹೊರಟರು. ಹಕ್ಕಿಗಳ ಮಧುರ ದನಿ ಅವರಿಬ್ಬರೂ ಹಾರ್ದಿಕ ಬೀಳ್ಕೊಡಿಗೆಗೆ ಸಿದ್ಧವಾಗುವಂತೆ ಕಂಡವು. ಪ್ರೇಮ ಚೆಲ್ಲಾಟದಿಂದ ಇಬ್ಬರ ದೇಹಗಳ ಆಲಸ್ಯ ಕಳೆದು ಆನಂದದಲ್ಲಿ ಮಿಂದು ಎದ್ದಿದ್ದವು. ಮತ್ತೆ ದೋಣಿಯನ್ನು ಹತ್ತಿ ಆಚಿನ ದಡವನ್ನು ಸೇರಿ ಅಲ್ಲಿಂದ ತಮ್ಮ ಮನೆಯತ್ತ ಹೊರಟರು. ಅಷ್ಟು ಹೊತ್ತಿಗಾಗಲೇ ಚಂದ್ರನು ಮತ್ತಷ್ಟು ಪ್ರಕಾಶ ಹೊಂದಿದ್ದನು. ಇಬ್ಬರೂ ಮನೆಗೆ ಬಂದು ಬಟ್ಟೆಯನ್ನು ತೆಗೆದು ಅಗ್ಗಿಷ್ಟಿಕೆಯಲ್ಲಿ ಮೈ

ಕೈ ಕಾಯಿಸಿಕೊಂಡರು. ಆಗಲೇ ಊಟದ ವ್ಯವಸ್ಥೆ ನಡೆದಿತ್ತು. ಇಬ್ಬರೂ ಊಟ ಮುಗಿಸಿ ಮಧುಚಂದ್ರವನ್ನು ವರ್ಣಿಸುತ್ತಾ ಮಲಗಿದರು:



ವಿಜಯ್ ರಾತ್ರಿಯ ಊಟಕ್ಕಾಗಿ ಬಟ್ಟೆಯನ್ನು ತೆಗೆದುಹಾಕಿ ಸ್ನಾನದ ಮನೆಗೆ ಹೋಗುವುದರಲ್ಲಿದ್ದ. ಕೇಶವಭಟ್ಟರು ಅವರ ಮನೆಗೆ ಬಂದು.

"ವಿಜಯಪ್ಪಾ" ಎಂದು ಕೂಗಿದರು. ವಿಜಯ್ ಬಂದು..

"ಏನು ಕೇಶವಭಟ್ಟರೇ " ಎಂದ ಮುಗುಳ್ನಗೆಯಿಂದ.

"ಸ್ವಾಮಿ..ಮಲುಹಣದೇವರ ಹಾಗೆ ಮಾಡಬಾರದಾಗಿತ್ತು."

"ಕಾಮಕ್ಕೆ ಕಣ್ಣಿಲ್ಲ ಅನ್ನೋದು ಗೊತ್ತಿಲ್ವೇ ?"

"ವಿಜೃಂಭಣೆಯಾಗಿ ಮದುವೆ ಆಗಲಿಕ್ಕೆ ಅವರಿಗೇನು ಸ್ವಾಮಿ ದೇವರು ಕಡಿಮೆ ಮಾಡಿದ್ದ ?"

"ಮದುವೆ ಆಗೋಲ್ಲ ಅನ್ನೋ ಶಪಥಕ್ಕೆ ತಾನೇ ಈಗ ಗೆಜ್ಜೆಪೂಜೆ ಆಯ್ತು.."

"ಈ ರೀತಿ ಸೂಳೆಗಾರಿಕೆ ಮಾಡೋದಕ್ಕಿಂತ ಶಪಥ ಕೆಟ್ಟಿದ್ರೇನಂತೆ ಮದ್ವೆ ಆಗಿದ್ರೆ, ಚೆನ್ನಾಗಿತ್ತು"

"ಅದನ್ನು ನಾನು ನೀನು ಹೇಳಿದ್ರೇನು ಬಂತು ಬಿಡಿ."

"ಏನೋ ಸ್ವಾಮಿ..ದೇವ್ರು ಏನು ಕೊಟ್ರೇನು ? ಹಣೆಯಲ್ಲಿ ಬರೆದದ್ದಕ್ಕೆ ಹೊಣೆ ಯಾರು ಅಂತ ? ಅವರವರು ತಂದದ್ದನ್ನು ಅವರವ್ರೇ ಅನುಭೋಗಿಸಬೇಕು.ಇನ್ನು ನಾನು ಬರ್ತೇನೆ. ನೀವು ಹೋಗಿ ಸ್ನಾನ ಮಾಡಿ"

ಎಂದು ಕೇಶವಭಟ್ಟರು ಹೊರಟರು. ದಾರಿಯಲ್ಲಿ ಹೋಗುತ್ತಾ,

"ಅಲ್ಲಾ ಕೇಡುಗಾಲಕ್ಕೆ ನಾಯಿ ಮೊಟ್ಟೆ ಹಾಕ್ತು ಅಂದ ಹಾಗೆ ಆಯ್ತು, ಏಕೆ ಈ ಮಲುಹಣನಿಗೆ ಈ ದುರ್ಬುದ್ಧಿ ಬಂತು ?ಅಲ್ಲಾ ಮಿತ್ರರ ಮಾತನ್ನು ಕೇಳಬಾರ್ದಾಗಿತ್ತಾ? ಅವರೇ ಕವಿಗಳು ತಿಳೀಬೇಡ್ವೇ ?"

ಮನೆಗೆ ಹೋಗಿ ಊಟ ಮಾಡದೆ ಕುಳಿತ. ಮಧ್ಯ ರಾತ್ರಿಯಾಯಿತು. ಹಾಗೆಯೇ ಮಲಗಿ ನಿದ್ರಿಸಿದ. ಬೆಳಗ್ಗೆ ಎದ್ದು ನಿತ್ಯಕರ್ಮಗಳಲ್ಲಿ ನಿರತನಾದ. ಅಷ್ಟರಲ್ಲಿ ಮಲುಹಣ ಬಂದ. ಕೇಶವಭಟ್ಟರು ಆತನನ್ನೇ ನೋಡುತ್ತಿರಲು..

"ಏಕೆ ಭಟ್ಟರೆ ನನ್ನನ್ನೇ ದುರದುರನೆ ನೋಡ್ತಿದ್ದೀರಿ ?"

"ಏಕಿಲ್ಲ" ಕಣ್ಣೀರು ಉರುಳಿತು.

"ಏಕೆ ಕಣ್ಣೀರು ಭಟ್ಟರೇ...?"

"ತಂದೆಯವರು ನಿಮಗೆ ಮದುವೆಮಾಡಿ ಸಂತೋಷಪಡಬೇಕೆಂದಿದ್ದರು. ಆದರೆ ನೀವು ದುಡುಕಿದಿರಿ"

"ಅವರಿಲ್ಲದೆ ನನಗೆಂಥ ಮದುವೆ ?"

"ವೇಶ್ಯಾ ಸಹವಾಸ ಕೆಟ್ಟದಲ್ಲವೇ ?" ಹೆಚ್ಚಿಗೆ ಮಾತು ಬರಲಿಲ್ಲ ಅವರ ಬಾಯಿಂದ. ಮಲುಹಣ ಮೌನಸ್ಥನಾದ.

"ಊಟಕ್ಕ ಬನ್ನಿ..."

ಎಂದು ಭಟ್ಟರು ಅಡಿಗೆ ಕೋಣೆಯತ್ತ ಹೊರಟರು. ಮಲುಹಣ ಬಂದು ಊಟ ಮಾಡಿ ಹೊರಟ. ಭಟ್ಟರು ಮಾತಾಡದೆ ಅಸಮಾಧಾನದಲ್ಲಿ ಕುಳಿತರು. ಅವರನ್ನೇ ನೋಡುತ್ತಾ ಮಲುಹಣ ತನ್ನ ಕೋಣೆಯತ್ತ ಹೆಜ್ಜೆ ಹಾಕಿದ.

❋❋❋❋❋❋❋❋❋❋

ಮಹಡಿಯ ಮೆಟ್ಟಿಲನ್ನು ಹತ್ತುತ್ತಾ ಪದ್ಮಾವತಿ ದನಿಗೂಡಿಸಿದಳು.

"ಮಗೂ...ಮಲುಹಣೀ.."

ತಾಯಿಯ ದನಿಯನ್ನು ಕೇಳಿದ ಮಲುಹಣೆ ಮಲುಹಣನೊಂದಿಗೆ ಸಹವಾಸ ದಲ್ಲಿದ್ದಾಕೆ ಅಲ್ಲಿಗೆ ಬಂದು..

'ಏನವ್ವಾ ?" ಎಂದಳು.

ಪದ್ಮಾವತಿ ಕೆಳಗಿಳಿಯುತ್ತಾ "ಬಾರವ್ವಾ..ಕೆಳಕ್ಕೆ ನಿನ್ನೊಂದಿಗೆ ಒಂದು ಮಾತಾಡ್ಬೇಕು" ಎನ್ನಲು ಯಾವ ಮಾತೋ ಎಂದು ಕೆಳಗಡೆ ಇಳಿಯುತ್ತಾ ಬಂದಳು.

ಪದ್ಮಾವತಿ ಹಜಾರದಲ್ಲಿದ್ದ ಮಂಚದ ಮೇಲೆ ಕುಳಿತು ಮಗಳನ್ನು ತನ್ನ ಹತ್ತಿರ ಕುಳಿತುಕೊಳ್ಳಲು ಹೇಳಿದಳು. ಮಲುಹಣೆ ಕುಳಿತಳು. ತಲೆಯನ್ನು ನೇವರಿಸುತ್ತಾ, ಹೇಗೆ ಮಾತನಾಡುವುದು ಎಂಬ ಸಂಕೋಚ ಭಾವನೆಯಲ್ಲಿ ಆಕೆಯನ್ನೇ ನೋಡುತ್ತಿದ್ದಳು. ಅದನ್ನು ಅರ್ಥ ಮಾಡಿಕೊಂಡ ಮಲುಹಣೆ,

"ಏನವ್ವಾ ಆ ಮಾತು ?" ಎಂದಳು.

"ನೀನು ಕೇಳ್ತೀನಿ ಅಂದ್ರೆ ಹೇಳ್ತೀನಿ ಅಲ್ದೇ ಹೋದ್ರೆ ಹ್ಯಾಗೆ ತಾನೇ ಸಾಧ್ಯ...?"

"ವಿಷಯ ಏನು ಅಂತ ತಿಳಿಯದೆ ನಾನು ಹ್ಯಾಗೆ ಹೇಳಲಿ ಹೇಳವ್ವಾ?"

"ಅದು ನಿನ್ನಿಂದ ಸಾಧ್ಯವಾಗುವ ಕೆಲಸವೇ ?"

"ನನ್ನ ಮನಸ್ಸು ಒಪ್ಪಿ ಸಾಧ್ಯವಾಗುತ್ತಿದ್ದರೆ ಖಂಡಿತ ಒಪ್ಪಿಕೊಳ್ಳುತ್ತೇನೆ. ಅದೇನು ವಿಷಯ ಹೇಳು ಮತ್ತೆ."

"ಮಗು ನಿನ್ನ ಸುಖಕ್ಕೆ ನಾನು ಹೇಳ್ತಾ ಇರೋದು "

"ಅದೇನು ಬಿಡಿಸಿ ಹೇಳವ್ವಾ ?"

"ಸೌರಾಷ್ಟ್ರದ ಕಡೆಯವರು ಬಂದಿದ್ದಾರೆ."

"ಯಾರು...?"

"ಅವರು ತುಂಬಾ ಶ್ರೀಮಂತರು"

"ಏತಕ್ಕೆ ?"

"ನಿನ್ನ ರೂಪ ಲಾವಣ್ಯ ಕೇಳಿ ಓಡಿ ಓಡಿ ಬಂದಿದ್ದಾರೆ. ನಿನ್ನೊಡನೆ ಒಂದು ರಾತ್ರಿ ಸುಖಪಟ್ಟರೆ ಸಾಕು. ಹತ್ತು ಸಾವಿರ ವರಹ ಕೊಡುತ್ತಾರಂತೆ ಇನ್ನೇನಾಗಬೇಕು?"

ಕಂಗಳಲ್ಲಿ ಕೆಂಡ ಕಾರುತ್ತಾ ಗುಡುಗಿದಳು ಮಲುಹಣೆ.

"ಅವ್ವಾ..ಇದೇನು ನೀನು ಹೇಳುತ್ತಿರುವುದು?"

"ಅದಕ್ಕೇನಂತೆ ?"

"ಈಗಾಗಲೇ ನನ್ನ ದೇಹವನ್ನು ಬೇರೆಯವನಿಗರ್ಪಿಸಿಲ್ಲವೇ ?"

ನಗುತ್ತಾ.."ಅದಕ್ಕೇನಂತೆ ಮತ್ತೊಬ್ಬನಿಗೆ ಕೊಟ್ಟರೆ ?"

" ಅದು ನನಗೆ ..ಒಗ್ಗುವುದಿಲ್ಲ ಕಣವ್ವಾ ?" ಕೆಂಗಣ್ಣು ಬೀರಿದಳು.

"ಅದನ್ನೆಲ್ಲಾ ಮರೆತು ಒಪ್ಪಿಕೊಳ್ಳಬೇಕು. ನೀನು ಆತನನ್ನು ನೋಡು ಸ್ವಲ್ಪ ಕಣ್ಣಾರೆ. ಆತನನ್ನು ನೋಡಿದರೆ ನೀನೇ ಬಿಡುವುದಿಲ್ಲಾ "

"ಹೇಗಿದ್ದಾನೆ ಗೊತ್ತೇ ? ಮನ್ಮಥ. ಸಾಕ್ಷಾತ್ ಮನ್ಮಥ"

"ಇರಬಹುದು"

"ಮತ್ತೇನಾಗಬೇಕು ನಿನಗೆ ರೂಪ, ಯೌವನ, ಐಶ್ವರ್ಯದ ತ್ರಿವೇಣಿ ಸಂಗಮವಿರುವಾಗ ?"

"ಮಲುಹಣ ನನ್ನ ಜೊತೆಯಲ್ಲಿದ್ದಾನೆಯಲ್ಲಾ"

"ಮಲುಹಣ ಇದ್ದರೇನಂತೆ ಅವನೊಂದೆಡೆ ಇರುತ್ತಾನೆ."

"ಅವ್ವಾ.." ಎನ್ನುತ್ತಿದ್ದಂತೆಯೇ ಕಂಗಳಲ್ಲಿ ನೀರು ಉರುಳಿತು.

"ಅಲ್ಲಾ ಮಲುಹಣೆ ನಿನ್ನ ಸುಖಕ್ಕೆ, ನಿನ್ನ ಹಿತಕ್ಕೋಸ್ಕರ ನಾನು ಹೇಳಿದರೆ ಕಣ್ಣೀರೇಕೆ ?"

"ಈ ರೀತಿ ಉಪದೇಶ ನೀಡಿದರೆ ಕಣ್ಗಳಲ್ಲಿ ನೀರು ಬರದೆ ಸಂತೋಷ ಉಕ್ಕಿ ಹರಿಯುತ್ತದೆಯೇನು ?"

"ಅದಕ್ಕೇ ಹೇಳೋದು ಮಂಕು ಅಂತ. ನಿನಗೆ ಅನುಭವ ಸಾಲದು ಅಂತ.."

"ಅವ್ವಾ ಹೀಗೆಲ್ಲಾ ಅಂದು ನನ್ನ ಹೊಟ್ಟೆ ಉರಿಸೋದರ ಬದಲು ಕತ್ತಿಯಿಂದ ಇರಿದು ಕೊಂಡುಬಿಡವ್ವಾ. ನಿಶ್ಚಿಂತೆಯಾಗಿ ಸತ್ತುಹೋಗ್ತೇನೆ"

"ನಿನಗೇನೇ ಬಂದಿರೋದು ಕಷ್ಟ ?" ಕಣ್ಣರಳಿಸಿ ನೋಡಿದಳು ತಾಯಿ.

"ಅವ್ವಾ ಹೀಗೆಲ್ಲಾ ನನ್ನನ್ನು ಬಂಧನಕ್ಕೆ ಒಳಪಡಿಸಿದರೆ ಇನ್ನೇನು ಮತ್ತೆ ?ನನಗೆ ಸಂತೋಷ ಹೇಗೆ ಸಿಗುತ್ತದೆ ? ಸಿಕ್ಕಿ ಸಿಕ್ಕಿದ ಪುರುಷರ ಕಾಮದ

ವಸ್ತುವಾಗಿ ಯತೇಚ್ಛ ಹಣವನ್ನು ಅವರಿಂದ ಸೂರೆಗೊಳ್ಳುವುದರಿಂದ ಸುಖ ಸಿಗುತ್ತದೆ ಎಂಬುದು ನಿನ್ನ ಕಲ್ಪನೆ ಅಷ್ಟೇ"

"ಅನುಭವ..."

"ಅದು ನನ್ನ ಭಾಗಕ್ಕೆ ನಿರರ್ಥಕ."

"ಹೇಳಿದಷ್ಟು ಕೇಳಬೇಕು"

"ನೀನು ಹೇಳುವ ವಿಷಯದಲ್ಲಿ ನನಗೆ ಸಾಮರಸ್ಯವಿಲ್ಲ. ಅದಕ್ಕೇನು ಮಾಡುವುದು ?"

"ಆಡಿದ್ದೇ ಆಡು ಕಿಸಿಭಾಯಿ ದಾಸಯ್ಯ ಅಂತ ಪೇಚಾಡ್ತೇಡ್ವೇ ? ಹೇಳಿದಷ್ಟು ಕೇಳು ನಿನ್ನ ಗಂಟು ಏನೂ ಹೋಗೋದಿಲ್ಲ."

"ಇಲ್ಲ ಅವ್ವಾ...ಇಲ್ಲ..ಖಂಡಿತ ನನಗೆ ಒಪ್ಪಿಗೆಯಿಲ್ಲ"

"ಹಾಗಾದರೆ ಅವರನ್ನು .."

"ಬಂದಂತೆ ಹಿಂತಿರುಗಿಸಿಬಿಡು."

"ಅದು ಮರ್ಯಾದೆಯ ಕೆಲಸವಲ್ಲ"

"ಅವರನ್ನು ಇರಿಸಿಕೊಳ್ಳುವುದೇ ನನಗೆ ಮರ್ಯಾದೆ ಕೆಲಸವಲ್ಲ"

ಹರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಂಡು ಮಲುಹಣಿ ನೇರವಾಗಿ ತನ್ನ ಕೋಣೆಯತ್ತ ಹೆಜ್ಜೆ ಕೀಳುವುದರಲ್ಲಿದ್ದಳು. ಪದ್ಮಾವತಿ ಬಿಡದೆ,

"ಇದೇನು ನಾನು ಮಾತಾಡ್ತನೇ ಇರ್ತಿದ್ದೀನಿ. ನೀನು ಮಾತಾಡ್ದೆ ಹೋಗ್ತಾ ಇದ್ದೀಯೆ ?"

ಮುಂದಿಟ್ಟ ಹೆಜ್ಜೆಯನ್ನು ಹಿಂದಿಟ್ಟು ತಾಯಿಕಡೆ ತಿರುಗಿ

"ಹೇಳಿದ್ನಲ್ಲಾ ಆಗ್ಲೇ"

"ಆಗೋಲ್ಲಾ ಅಂತಾ ಹೇಳ್ದೆ"

"ಆಗಬೇಕು ಅಂತ ಹೇಳಲಿಕ್ಕೆ ಇಷ್ಟವಿಲ್ಲ"

"ಪ್ರಚಂಡಿ, ನೀನು ಹೆತ್ತಾಗ ತಾಯಿ, ಈಗೇನು ? ಆಕೆಯ ಮಾತು ಈಗ ನಿನಗೆಲ್ಲಿ ಲಕ್ಷ್ಯ ಬಂದೀತು ?"

"ನನ್ನನ್ನು ಹಿಂಸೆ ಮಾಡುವುದು ಸರಿಯಲ್ಲವ್ವಾ. ನೀನು ಅವರನ್ನು ಹಿಂದಕ್ಕೆ ಕಳುಹಿಸಿಬಿಡು. ನನಗೆ ಮಲುಹಣನೊಬ್ಬನೇ ಸಾಕು, ಆತನ ಆಸ್ತಿಯೇ ಬೇಕಾದಷ್ಟು"

"ಹಾಳಾಗು.."

ಮಲುಹಣೆ ನೇರವಾಗಿ ಮಹಡಿಯ ಮೆಟ್ಟಿಲನ್ನು ಹತ್ತುತ್ತಾ ತನ್ನ ಕೋಣೆಯತ್ತ ನಡೆದಳು.

"ಹಾಳು ಪ್ರಾರಬ್ಧ ಸುಖಪಡಲಿಕ್ಕೆ ತಿಳಿಯೋಲ್ಲ. ಹಣವನ್ನು ಗಳಿಸುವುದು ಗೊತ್ತಾಗೋಲ್ಲ" ಪದ್ಮಾವತಿ ತಲೆಯ ಮೇಲೆ ಕೈ ಹೊತ್ತು ಚಿಂತಿಸತೊಡಗಿದಳು.

❋ ❋ ❋ ❋ ❋ ❋ ❋

ಅಂದು ಮಲುಹಣನು ವಿಲಾಸ ಗೃಹವನ್ನು ಪ್ರವೇಶಿಸುತ್ತಿದ್ದಂತೆಯೇ ಹಸನ್ಮುಖವಾಗಿ ಸುವಾಸನೆಯನ್ನು ಗ್ರಹಿಸುತ್ತಾ ಬರುತ್ತಿರಲು ಮಲುಹಣೆ..

"ಏನು ಕೋಣೆಯ ವಾಸನೆಯನ್ನು ದೂರದಿಂದಲೇ ಗ್ರಹಿಸುತ್ತಾ ಬರುತ್ತಿದ್ದೀರಿ?"

"ದೂರದಲ್ಲೇ ಅಷ್ಟೊಂದು ಸುವಾಸನೆ ಇರಬೇಕಾದರೆ ಇನ್ನು ಹತ್ತಿರ ಬರುತ್ತಾ, ಬರುತ್ತಾ ಮತ್ತೆಷ್ಟು ಸುವಾಸನೆ ಬರಬಹುದು ಎಂಬುದನ್ನು ಲೆಕ್ಕ ಹಾಕುತ್ತಾ ಬರುತ್ತಿದ್ದೇನೆ."

"ಮತ್ತಿನ್ನೇನು ನವ ಕುಸುಮಗಳೇ ಇರಬೇಕು."

"ಅದೂ ಅಲ್ಲ"

"ಕಸ್ತೂರಿಯ ಸುಗಂಧವೇ ?"

"ಊಂ...ಹೂಂ.."

"ಒಂದೂ ಅಲ್ಲದೇ ಮತ್ತಿನ್ನೇನು ?"

"ನಿನ್ನ ಬಿಸಿಯುಸಿರಿನ ಗಂಧ."

ಎಂದು ಹತ್ತಿರ ಬಂದು ಆಕೆಯ ಮೂಗಿಗ ತನ್ನ ಮೂಗನ್ನು ತಾಗಿಸಿ ಗಂಧ ಗ್ರಾಹಿ ಮಾಡುತ್ತಾ ಅದರಲ್ಲೇ ಮತ್ತಾದವನಂತಾದ. ಆಕೆಯಲ್ಲೂ ಅದೇ ಭಾವವಾಯಿತು.

ಮಲುಹಣೆ ಪ್ರಿಯತಮನನ್ನು ಕುರಿತು..

"ಕವಿಗಳೆಂದರೆ ನೀವು ಉಸಿರಿನಲ್ಲೂ ಸುಗಂಧ ಕಾಣುವ ಕಲ್ಪನಾ ದೇವರು"

"ಅದನ್ನೂ ನಾನೇನು, ಹಿಂದೆ ಕಾಮಶಾಸ್ತ್ರದಲ್ಲಿ ನಂದಿ, ವಾತ್ಸಾಯನ ಮೊದಲಾದವರೇ ಹೇಳಿದ್ದಾರೆ"

"ನೀವು ಬರೇ ಕವಿಗಳೆಂದು ತಿಳಿದುಕೊಂಡಿದ್ದೆ. ಆದರೆ ಕಾಮಶಾಸ್ತ್ರ ಕಲಾ ಪಂಡಿತರೂ ಸಹ"

"ಅಷ್ಟೇನೂ ನೀವು ಹೇಳುವಂತೆ ಅಲ್ಲ ಎಂದು ನಾನು ತಿಳಿದುಕೊಂಡಿದ್ದೆ"

"ಅದು ನಿಜವೆಂದೇ ನಾನು ಭಾವಿಸಿಕೊಂಡಿರುವೆ"

"ಕಾಮವೆಂಬುದು ಕಣ್ಣುಗಳಿಂದ ನೋಡುವುದು, ಕಿವಿಗಳಿಂದ ಕೇಳುವುದು ನಾಲಿಗೆಯಿಂದ ರುಚಿ ನೋಡುವುದು, ಮೂಗಿನಿಂದ ಸುವಾಸನೆ ತಿಳಿಯುವುದು, ಹಾಗೂ ಚರ್ಮದಿಂದ ಸ್ಪರ್ಶಿಸುವುದು, ಇವು ಐದರ ಗ್ರಹಣ ಶಕ್ತಿ ಮನಸ್ಸು ಮತ್ತು ಆತ್ಮವನ್ನು ಹೊಂದಿಕೊಂಡಿವೆ."

"ನಿನ್ನನ್ನು ನೋಡಿ ಕಣ್ಣುಗಳಿಗೆ ಸುಖಕೊಟ್ಟೆ, ನಿನ್ನ ಮಧುರ ದನಿಯನ್ನು ಕೇಳಿ ಆನಂದಪಡಿಸಿದೆ ಕರ್ಣಗಳಿಗೆ, ನಿನ್ನ ಸುಗಂಧ ಗಾಳಿಯನ್ನು ಗ್ರಹಿಸಿ ಮೂಗಿಗೆ ಆನಂದ ಕೊಟ್ಟೆ, ನಿನ್ನನ್ನು ಚುಂಬಿಸಿ ನಾಲಿಗೆಗೆ ರುಚಿಯನ್ನು ಕೊಡಿಸಿದೆ. ನಿನ್ನನ್ನು ಸ್ಪರ್ಶಿಸಿ ಚರ್ಮಕ್ಕೆ ಆನಂದ ಕೊಟ್ಟೆ ಇದೇ ಅನುರಾಗದ ಗುಟ್ಟು"

" ಆ ಗುಟ್ಟನ್ನೆಲ್ಲಾ ಏಕೆ ರಟ್ಟು ಮಾಡ್ತಾ ಇದ್ದೀರಿ ?"

"ಹಿಂದಿನ ಕಾಲದ ಋಷಿ ಮುನಿಗಳೇ ರಟ್ಟು ಮಾಡಿದ್ದಾರೆ. ಕಾವ್ಯ ರೂಪದಲ್ಲಿ ಇಳಿಸಿದ್ದಾರೆ ಅಂದ ಮೇಲೆ ನನ್ನ ಆತ್ಮೀಯಳಿಗೆ ಹೇಳಿದರೇನಾಯ್ತು?"

ಎಂದು ಮೆಲ್ಲನೆ ಗಲ್ಲವನ್ನು ಚುಂಬಿಸಿದ. ರುಚಿಯನ್ನು ಚಪ್ಪರಿಸುತ್ತಾ

"ಆಹಾ ನಿನ್ನ ಚೂಪುಗಲ್ಲ ತಾಕಿದಾಗ ಆಗುತ್ತಿರುವ ಪುಳಕ ಮರೆಯಲು ಹೇಳಲು ಸಾಧ್ಯ...ಹೇಳಲಸಾಧ್ಯ...ಗಲ್ಲದಲ್ಲಿ ಅಮೃತವಿದೆ."

ಆಕೆಯ ಬಯಕೆಯ ಕುಡಿ ಮತ್ತಷ್ಟು ಚಿಗುರಿತು. ಕೆಂಪೇರಿದವು ಕೆನ್ನೆಗಳು. ಮತ್ತೆ ಅಲ್ಲಿಗೆ ತುಟಿಗಳನ್ನೊತ್ತಿದನು. ತುಟಿಗಳು ಕಾಮದ ಕಾವಿನಿಂದ ಕಾದು ಕೆಂಪಾಗಿತ್ತು. ಅದನ್ನು ತಂಪು ಮಾಡಿಕೊಳ್ಳಲು ಲಾಲಾರಸವನ್ನು ಸವರಿದಳು. ಅದು ಬೆಳಕಿಗೆ ಥಳಥಳನೆ ರಂಜಿಸಿತು. ಅದನ್ನು ನೋಡಿ ಸಹಿಸಲಾರದೆ ಹೋಯಿತು. ಮಲುಹಣನ ತುಟಿಗಳು ಮತ್ತೆ ತುಟಿಗಳಿಗೆ ಚುಂಬಿಸಿದನು. ಜೇನು ಹೀರಿ ಅದರ ಸವಿಯನ್ನು ತಿಳಿದು ಆತನು ಮತ್ತೆ ಮತ್ತೆ ದುಂಬಿಯು ಹೂವನ್ನು ಬಗೆಯುವಂತೆ ತುಟಿಗಾಗಿ ಕಾತರಿಸಿದನು. ಅದನ್ನು ನೋಡಿ ನಗುತ್ತಾ..

"ತುಟಿಯಲ್ಲಿ ಏನಿದೆ ?" ಎಂದಳು ಮಲುಹಣಿ.

"ಜೊಲ್ಲು ರಸವಿದೆ."

"ಅರಸಿಕಳಿಗೆ ಜೊಲ್ಲು...ರಸಿಕರಿಗೆ ಜೇನು"

"ಹಾಗಾದರೆ ನೀವು ರಸಿಕರು ಎನ್ನಿ"

"ರಸಿಕರ ರಸಿಕ..."

"ರಸಿಕ ಚಕ್ರಿ ಎನ್ನುತ್ತೇನೆ ನಾನು"

"ಹೌದು...ನಿನಗೇನು ಭಾವನೆ ಬರುತ್ತದೆಯೋ ಹಾಗನ್ನು, ನನ್ನರಗಿಣಿ ನೀನು ನನ್ನನೇನೆಂದರೂ ಚೆನ್ನು."

"ಸಾಕು"ಎಂದು ಮೆಲ್ಲನೆ ಚಿವುಟಿದಳು.

"ಹಾಯ್"ಎಂದ ಮಲುಹಣ.

"ಏಕೆ ನೋವಾಯಿತೆ ?"

"ಇಲ್ಲ ಸಂತೋಷವಾಯಿತು'ಮುಖವನ್ನು ಸೊಟ್ಟ ಮಾಡಿ ಹೇಳಿದ ಕೂಡಲೇ ಮಲುಹಣೆ.

"ಸಾಕು ಸುಮ್ಮನೆ ನಿಮ್ಮನ್ನು ಚಿವುಟಿದರೆ ನೋವಾಗುವುದೇ?"

"ಎಲ್ಲಿ ನಾನು ಚಿವುಟುತ್ತೇನೆ. ಆಗ ಗೊತ್ತಾಗುತ್ತದೆ. ನೋವಾಗುತ್ತದೆಯೋ ಅಥವಾ ಇಲ್ಲವೋ ಎಂದು"

ಎಂದು ತೋಳುಗಳೆರಡನ್ನು ಉಗುರಿನಿಂದ ಸ್ವಲ್ಪ ಬಿರುಸಾಗಿಯೇ ಚಿವುಟಿದನು

"ಹಾಯ್..." ಎಂದಳು.

ನೋವಾಗಿರಬಹುದೆಂದು ಮಲುಹಣ ತಿಳಿದು

ನೋಡಿದೆಯಾ ಈಗ" ಎಂದ.

"ಆಹಾ ಎಷ್ಟೊಂದು ಚೆನ್ನಾಯಿತು ?"

"ಏನು ನಿನ್ನ ತಲೆ ಚೆನ್ನಾಯಿತು ?"

"ನಕ್ಕಷ್ಟೆ...ನನಗೆ ಅಕ್ಷತೆಯಾಯಿತು"

"ಪರವಾಗಿಲ್ಲ ನೀನು ಅರಸಿಕಳು ಅನ್ನುತ್ತಿದ್ದೆ. ಆದರೆ ನಿನ್ನ ಕಾಮ ಚೇಷ್ಟೆಗಳನ್ನು ನೋಡಿದರೆ ಎಷ್ಟೊಂದು ರಸಿಕತೆ ತುಂಬಿ ತುಳುಕಾಡುತ್ತಿದೆ. ನೀನೂ ರಸಿಕ ಚಕ್ರಿಯೇ...ಮೋಹದ ತರಂಗಿಣಿಯೇ"

"ಹೌದು...ಇಬ್ಬರೂ ಅಷ್ಟೇ ರಸಿಕ ಚಕ್ರವಾಕಗಳು"

"ಸೂಕ್ಷ್ಮಾಮೃತಪಾನ ಮಾಡಲಿಕ್ಕೆ ಅಲ್ಲವೇ ?"

ಅಲ್ಲ ಅಮೃತಪಾನ ಮಾಡಲು"

"ಹಾಗಾದರೆ...ಈಗ ಮಾಡಬಹುದೇ ?"

"ಈಗಲ್ಲ"

"ಮತ್ತೆ...?"

"ಚಂದ್ರನ ಬೆಳದಿಂಗಳು ಬಂದಾಗ"

"ಹಾಗಾದರೆ ಇಂದು ಅಮಾವಾಸ್ಯೆ. ಇನ್ನು ಹದಿನೈದು ದಿನಗಳು ತಡೆಯಬೇಕೆ? ನನ್ನ ಮನಸ್ಸು ತಡೆಯುವುದಿಲ್ಲ."

"ಅದು ಪ್ರಕೃತಿ ನಿಯಮದತ್ತವಾಗಿ ನಡೆದು ಬಂದಿದೆ. ಅಷ್ಟರತನಕ ತಡೆದುಕೊಳ್ಳಲೇಬೇಕು"

"ಅವೆಲ್ಲ ಸುಳ್ಳು...ಕವಿ ಕಲ್ಪನೆ"

"ಸಾಕು ಇಂದಿನ ರತಿ ಸುಖವನ್ನು ಉಣ್ಣಲು ಕವಿಗಳೆಂಬುದನ್ನು ಮರೆತು ಕೇಳುತ್ತಿದ್ದೀರಿ. ಈ ರೀತಿ ಯೋಚಿಸುವುದಕ್ಕೆ ನಾಚಿಕೆಯಾಗುವುದಿಲ್ಲವೇ ?"

"ನನ್ನವಳನ್ನು ನಾನು ಕೇಳಿದರೆ ತಪ್ಪೇನು ? ಎಂದು ಮೆಲ್ಲನೆ ಸವಿ ತೋಳು ಗಳನ್ನು ಹಿಡಿದು ಅಪ್ಪಿಕೊಂಡ 'ಆಹ್..' ಎಂದು ಕಣ್ಮುಚ್ಚಿಕೊಂಡ. ಮಲುಹಣೆ "ಮಲುಹಣಾ" ಎಂದು ಕನಸಿನ ಲೋಕದಲ್ಲಿ ವಿಹರಿಸುವಂತೆ ಭಾವನಾ ಪರವಶಳಾಗಿರಲು..

"ಏಕೆ ? ಏನಾಯಿತು ?" ಎಂದ ಮಲುಹಣ.

"ನನ್ನ ಅಂಗಾಂಗದಲ್ಲೂ ಏನೋ ಸಂಚಾರ ಮತ್ತು ನಿಮ್ಮ ಆಲಿಂಗನ ದಿಂದ" ಮತ್ತೆ ಬರಸೆಳೆದು ಅಪ್ಪಿಕೊಂಡ. ಬಂಧನವು ಬಿಗಿಯಾಗಲು ಆಕೆಯ ಎದೆಯು ಆತನ ಎದೆಯಲ್ಲಿ ಕರಗಿದಂತಾಯಿತು. ಎದೆಯ ಬಡಿತವು ಜೋರಾ ಯಿತು.

"ಮಲುಹಣೇ...ಏನು ನಾಡಿಯ ಹೊಡೆತ ಜೋರಾಗಿದೆ ಏಕೆ ಭಯವೇ ?"

"ಇಲ್ಲ. ಏನೋ ಒಂದು ರೀತಿ"

"ಪ್ರೇಮ ಅಂಕುರಿಸಿದ ಮೇಲೆ ಹಾಗೇ"

ಎಂದು ಮೆಲ್ಲನೆ ಬೇರ್ಪಟ್ಟು ಕುಳಿತರು. ನಾಚಿದ ಕನ್ಯೆ ಬೆರಳುಗಳಿಂದ ನೆಲವನ್ನು ಕೆರೆಯುತ್ತಾ ಬಗ್ಗಿ ಕುಳಿತಿದ್ದಳು. ಮತ್ತೆ ಕೆಣಕಿ ತನ್ನ ಕಾಲಿಂದ ಮಲುಹಣನು ಆಕೆಯ ಕಾಲನ್ನು ಸವರಿದ ಕೂಡಲೇ ಆಕೆ ಬೆಚ್ಚಿ ಶಿರವನ್ನು ಮೇಲೆತ್ತಿ ಉಗುಳು ನುಂಗುತ್ತಾ ಉಸಿರನ್ನು ಜೋರಾಗಿ ಒಂದೇ ಸಮನೆ ಬಿಡುತ್ತಾ ಕುಳಿತಳು. ಮತ್ತೆ ಕೈನಿಂದ ಕೈಗಳನ್ನು ಸವರಿದನು. ಆಕೆ ಕುಪಿತಳಾಗಿ ಕೈಯನ್ನು ಕಚ್ಚಿಬಿಟ್ಟಳು. ಅದನ್ನು ತೋರುತ್ತಾ ಮಲುಹಣ..

"ಈಗ ಸಂತೋಷವಾಯಿತೇ ಕಚ್ಚಿದ ಮೇಲೆ ?"

ಮಲುಹಣೆ ಕೈ ಸವರಿ ನೋಡಿದಳು. ಮಲುಹಣನಿಗೆ ಅದು ಬಹಳ ಹಿತವಾಗಿತ್ತು.

"ನೋಡು ನಿನಗೆ ನಾನು ಕಚ್ಚುತ್ತೇನೆ. ನೋವಾಗುತ್ತದೆಯೋ ಇಲ್ಲವೋ ?" ಎಂದು ಕೈ ಸೆಳೆದುಕೊಳ್ಳಲು.

"ನಿಮ್ಮ ದಮ್ಮಯ್ಯಾ ಬೇಡಿ...ಬಿಡಿ...ನಾನು ಮಾಡಿದ್ದು ತಪ್ಪಾಯ್ತು" ಎಂದು ಚೀರಿದಳು.

"ತಪ್ಪೇನೋ ಸರಿಯೇ"

"ಬಿಡಿ ಮತ್ತೆ" ಎಂದರೂ ಬಿಡದೆ ಕಚ್ಚಲು ಬಾಯಿ ಹಾಕುತ್ತಿದ್ದ. ಅದನ್ನು ನೋಡಿ ಆಕೆಗೆ ಗಾಬರಿಯಾಯಿತು. ಆತ ಬಿಡದೆ ಕಚ್ಚಲು ನೋವಿನ ಬದಲು ಹಿತವೇ ಕಂಡಿತು. ಆಗ ಆಕೆ

"ಈಗ ಸಮಾಧಾನವಾಯಿತೇ ಪ್ರಭುಗಳಿಗೆ ?"

"ಮುಯ್ಯಿಗೆ ಮುಯ್ಯಿ ತೀರಿತಲ್ಲ"

"ನಿಮ್ಮ ಹುಡುಗಾಟ, ಕಡಿದಾಟ, ಚೆಲ್ಲಾಟ, ನಿಲ್ಲಲೇ ಇಲ್ವಲ್ಲಾ ?"

"ಇದು ಹುಡುಗಾಟವೇನೇ ? ದೊಡ್ಡಾಟಾನೇ, ಇವೆಲ್ಲಾ ಪ್ರೇಮ ಜಗಳ ಸರ್ವೇ ಸಾಮಾನ್ಯವಾಗಿ ಎಲ್ಲರಲ್ಲೂ ಸಹಜವಾಗಿ ನಡೆಯುವುದೇ. ಅದೇ ದೊಡ್ಡವರು ಗಾದೆ ಮಾಡಿರೋದು. "ಗಂಡ ಹೆಂಡಿರ ಜಗಳ ಉಂಡು ಮಲಗೋ ತನಕ" ಅಂತ.

"ಸರಿ ಆಯ್ತಲ್ಲ ಮಲಗಿ ದೀಪ ಕಡಿಮೆ ಮಾಡುತ್ತೇನೆ"

"ಏಕೆ ಸಣ್ಣ ಜಗಳದಲ್ಲೇ ಈಹೊತ್ತು ಮಲಗಿಬಿಡೋಣ ಅನ್ತೀಯಾ?"

"ದೊಡ್ಡ ಜಗಳ ಆಮೇಲೆ."

ಎಂದು ದೀಪ ಆರಿಸಿದಳು. ಹೊರಗಿನ ಚಳಿಯಿಂದಲೂ ಹಿಮವು ಸತತವಾಗಿ ಬೀಳುತ್ತಿದ್ದುದರಿಂದಲೂ ಇಬ್ಬರೂ ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಂಡು ಮಲಗಿದರು. ನಿದ್ದೆಯು ಬೆಳಕು ಹರಿಯುತ್ತಿದ್ದರೂ ಮುಂದುವರಿಯುತ್ತಿತ್ತು.

ಹಕ್ಕಿಗಳು ಕೂಗಿದರೂ ಏಳಲೇ ಇಲ್ಲ ಸೂರ್ಯ ಹುಟ್ಟಿ ಒಂದು ಮಾರು ಬಂದಿದ್ದ ಆಗ ಮಲುಹಣೆಗೆ ತಾಯಿಯ ಜೋರಾದ ಬಾಯಿನಿಂದ ಕಣ್ತೆರೆಯಿತು. ಅಪ್ಪಿಕೊಂಡ ಮಲುಹಣನನ್ನು ಮೆಲ್ಲನೆ ಬಿಡಿಸಿಕೊಂಡು ಹೊದ್ದಿಗೆಯನ್ನು ತೆರೆದಳು. ಬಟ್ಟೆಗಳೆಲ್ಲಾ ಅಸ್ತವ್ಯಸ್ತವಾಗಿ ನಿರ್ವಾಣದಲ್ಲಿದ್ದಳು. ಕೂಡಲೇ ಬಟ್ಟೆಗಳನ್ನು ಒಂದೊಂದಾಗಿ ತೊಟ್ಟುಕೊಂಡಳು. ಅಷ್ಟರಲ್ಲಿ ಮಲುಹಣನಿಗೂ ಎಚ್ಚರವಾಗಿ ತನ್ನ ಬಟ್ಟೆಗಳನ್ನು ಸರಿಪಡಿಸಿಕೊಂಡ. ಲಜ್ಜೆಯಿಂದ ಮಲುಹಣೆ ಬಾಗಿಲು ಸರಿಸಿ ಹೊರಟಳು.

ಪದ್ಮಾವತಿಯು ಮಗಳು ಎದ್ದು ಬರುತ್ತಿದ್ದುದನ್ನು ನೋಡಿ..

"ಈಗ ಎದ್ದೆಯವ್ವಾ...ನಡೆ ಸ್ನಾನಕ್ಕೆ" 'ಹ್ಞೂಂ' ಎಂದು ಮಗಳು ಶೌಚಾದಿ ಕರ್ಮಗಳನ್ನು ಮುಗಿಸಲು ಹೊರಟಳು.



ಮಲುಹಣೆಯ ರೂಪ ಲಾವಣ್ಯ ಕೇಳಿ ಕಳಿಂಗದೇಶದಿಂದ ಸಾಹುಕಾರನೊಬ್ಬ ಬಂದು ಪದ್ಮಾವತಿಯನ್ನು ಒಂದು ರಾತ್ರಿಗೆ ಇಪ್ಪತ್ತು ಸಾವಿರ ವರಹ ಕೊಡಲು ಸಿದ್ಧ ಮಲುಹಣೆಯನ್ನು ಒಂದು ರಾತ್ರಿ ತನ್ನ ಜತೆ ಇರುವಂತೆ ಕೇಳಿದ. ಹಿರಿಹಿರಿ ಹಿಗ್ಗಿದ ತಾಯಿ ಮಗಳನ್ನು ಒಪ್ಪಿಸುವುದು ಹೇಗೆ ಎಂದು ಚಿಂತಿಸಿದಳು.. ಹೇಗಾದರೂ ಮಾಡಿ ಒಪ್ಪಿಸುವೆ ಎಂದು ನಿರ್ಧಾರ ಮಾಡಿಕೊಂಡಳು. ಮಲುಹಣೆ ಬರುತ್ತಿರಲು ತಾಯಿ..

"ಮಲುಹಣೇ...ಬಾ ಇಲ್ಲಿ.." ಎಂದಳು.

"ಏನವ್ವಾ ?"

"ನೀನು ನನ್ನ ಮಾತು ಅಂದ್ರೆ ಅಷ್ಟೊಂದು ಅಲಕ್ಷ್ಯ ಮಾಡೋದು ನನಗೆ ಸರಿಯಲ್ಲ"

"ಸರಿಯಾದ ಮಾತಾದ್ರೆ ಬೆಲೆ ಕೊಡಬಹುದು, ಅದೇನವ್ವಾ ?"

"ನೋಡು ನೀನು ನಿನ್ನನ್ನು ಅರಿಸಿ ಬಂದ ಅನೇಕ ಸಾಹುಕಾರರನ್ನು ಕೈ ಬಿಟ್ಟಿದ್ದೀಯೇ, ಕಾಲು ಕಸ ಮಾಡಿದ್ದೀಯೆ."

"ಹಾಗಾದ್ರೆ ಈಗ್ಯಾರು ಬಂದಿದ್ದಾರೆಯವ್ವಾ ?"

ಮುದುಕಿ ಈ ಮಾತು ಕೇಳಿ ಹಿಗ್ಗಿ..

"ಬಂದಿದ್ದಾರೆ ಕಣವ್ವಾ...ಕಳಿಂಗ ದೇಶದ ಸಾಹುಕಾರರು ಒಂದು ರಾತ್ರಿಗೆ ಇಪ್ಪತ್ತು ಸಾವಿರ ವರಹವಂತೆ"

"ಅವ್ವಾ.. ನನಗೆ ಈ ವಿಷಯದಲ್ಲಿ ಮಾತಾತ್ತಬೇಡ ಅಂತ ಹೇಳಿಲ್ಲವೇ ?"

'ಅಲ್ಲಮ್ಮ ಅಷ್ಟು ದೂರದಿಂದಬಂದವರನ್ನು ನಿರಾಶರಾಗಿ ಕಳು ಹಿಸುವುದೇ ? ಮಾತು ರಂಗೇರಿತು..

"ಅವರನ್ನು ನಾನು ಬನ್ನಿ ಎಂದು ಕರೆದಿದ್ದೇನೆಯೇ ?" ಮಾರುತ್ತರ

"ಬಂದವರನ್ನು ಹೀಗೆ ಅವಮಾನ ಮಾಡುವುದೇ ?"

"ನೀನು ಹಾಗೆ ನನಗೆ ಹೇಳಿ ಅವಮಾನ ಪಡಿಸಬಹುದೇ ?"

"ಮನೆಗೆ ಬಂದ ಲಕ್ಷ್ಮಿಯನ್ನು ಕಾಲಿನಿಂದ ಒದೆಯುವುದು ಸರಿಯೇ?"

"ಈಗಲೇ ನನಗೇ ಬೇಕಾದಷ್ಟು ಐಸಿರಿ ಇದೆ. ನನಗೆ ಅದು ವ್ಯಾಮೋಹವಿಲ್ಲ"

"ನನಗಿದೆಯಲ್ಲಾ ನಿನ್ನ ಮಲುಹಣನನ್ನು ಬಿಡು ಅಂತ ಹೇಳೋಲ್ಲ ಅವನ ಜತೆಗ ಇವನನ್ನೊಂದು ರಾತ್ರಿ ತೃಪ್ತಿ ಪಡಿಸು"

"ಇಲ್ಲ" ಎಂದು ಕಿಡಿಗಣ್ಣನಿಂದ ಹೊರಟಳು ಅಲ್ಲಿಂದ.

ಪದ್ಮಾವತಿ ಏನು ಮಾಡಬೇಕೆಂದು ಚಿಂತಿಸಿದಳು.

ಈಕೆಗೆ ಹೀಗೆ ಮಾಡಿದರೆ ಸರಿಯಲ್ಲ. ಮಲುಹಣನ ಎದುರಿಗೆ ಮಾನ ಕಳೆಯಬೇಕು. ನನ್ನ ಮಾತಿಗೆ ಆತನು ಮನೆ ಬಿಟ್ಟು ಹೊರಡಬೇಕು ಹಾಗಾದ ತಾನೇ ಆಕೆ ಸರಿಹೋಗುತ್ತಾಳೆ. ಇಲ್ಲದಿದ್ದರೆ ಅವನು ತನ್ನ ಪ್ರತಿಷ್ಠೆಯನ್ನ ನಡೆಸುತ್ತಿದ್ದಾಳೆ. ಆತನನ್ನು ಮನೆಯಿಂದ ಹೊರಗೆ ಹಾಕಿದಮೇಲೆ ಹೇಗೆ ತಾನು ಹೇಳಿದ ಮಾತನ್ನು ಕೇಳುವುದಿಲ್ಲ ನೋಡುತ್ತೇನೆ. ನಾಳೆ ಹೇಗಾದರೂ ಮಾಡಿ

ಆಕೆ ಕೋಣೆಗೆ ಹೋಗಿ ಆತನೆದುರಿಗೇ ತರಾಟೆಗೆ ತೆಗೆದುಕೊಳ್ಳುತ್ತೇನೆ. ಆತ ಮನೆಬಿಟ್ಟು ಹೋದರೆ ಅನೇಕ ಸಾಹುಕಾರರೆಲ್ಲಾ ತಮ ಐಶ್ವರ್ಯವನ್ನೆಲ್ಲಾ ನನ್ನ ಮಗಳಿಗೆ ಸುರಿದು ಹೋಗತ್ತಾರೆ. ಐಶ್ವರ್ಯದ ರಾಶಿಯಮೇಲೆ ಕುಳಿತು ನಾವು ಆಮೇಲೆ ಓಲಾಡಬಹುದು"

ಎಂಬ ಕನಸನ್ನು ಕಟ್ಟಿ, ನಾನಾ ವಿಧವಾಗಿ ಹಂಬಲಿಸಿದಳು ಪದ್ಮಾವತಿ. ಆದರೆ ನಿಸ್ಸಹಾಯಕಳಾಗಿ ಅಂದು ಆ ಸಾಹುಕಾರನನ್ನು ಕಳುಹಿಸಬೇಕಾಯಿತು.

ಮಲುಹಣೆಯು ತನ್ನ ಕೋಣೆಗೆ ಬಂದು ಕುಳಿತುಕೊಂಡಳು.

"ತಾಯಿಯ ಹಿಂಸೆ ದಿನ ದಿನಕ್ಕೆ ಹೆಚ್ಚುತ್ತಿದೆಯಲ್ಲಾ, ಏನು ಮಾಡುವುದು ? ನನ್ನನ್ನು ಆರಿಸಿ ಬರುವವರೂ ತಪ್ಪಲಿಲ್ಲ. ನಾನು ಸಹ ನೋಡುವ ತನಕ ನೋಡುತ್ತೇನೆ. ಕೊನೆಗೆ ಮಲುಹಣನನ್ನು ಕರೆದು ಕೊಂಡು ದೇಶಾಂತರವಾದರೂ ಹೊರಟುಬಿಡುತ್ತೇನೆ"

ಹೀಗೆ ಯೋಚಿಸುವಾಗ ಮಲುಹಣನು ಬರಲು ಕಣ್ಣಲ್ಲಿ ಹರಿದ ನೀರನ್ನು ಕೈಯಿಂದ ಒರೆಸಿಕೊಂಡು ಕುಳಿತಳು. ದುಃಖವನ್ನು ಮರೆಸಿ ನಗುವ ಪ್ರಯತ್ನ ಮಾಡಿದಳು. ಮಲುಹಣನು ಅದನ್ನು ಅರ್ಥ ಮಾಡಿಕೊಂಡು..

"ಮಲುಹಣೇ..."ಎಂದ.

"ಬನ್ನಿ.."

"ಏಕೆ ಅಳುತ್ತಿದ್ದೀಯೆ ? ನಿನಗೇನು ಕಡಿಮೆಯಾಯಿತು ಹೇಳು. ನಾನು ನಿನ್ನ ಆಸೆಯನ್ನು ಫಲಗೂಡಿಸುತ್ತೇನೆ"

"ನನಗೇನು ಕಡಿಮೆಯಿದೆ. ಕುಬೇರನ ಕೈಹಿಡಿದು ?"

"ಮತ್ತೆ ಚಿಂತೆ, ಕಣ್ಣೀರು ಏಕೆ ?"

"ಏಕೂ ಇಲ್ಲ"

"ಏನಿಲ್ಲ, ಏಕೂ ಇಲ್ಲ ಎಂದರೆ ನನಗೆ ತಿಳಿಯುವುದಿಲ್ಲವೆಂದುಕೊಂಡಿದ್ದೀಯಾ ? ನಿನ್ನ ಮುಖವು ಇತ್ತೀಚೆಗೆ ಕಳೆಗುಂದುತ್ತಿದೆ. ಮರುದಿನ

ಗೆಲುವಾಗುತ್ತೀಯಾ. ? ಮತ್ತೆ ಸೋತಿರುತ್ತೀಯೆ ಕಾರಣ ? ನಿನಗೆ ಏನು ಕಷ್ಟಟ ನನ್ನಲ್ಲೂ ಹೇಳಬಾರದೆ ?"

ಇದ್ದಕ್ಕಿದ್ದಂತೆ ಕಣ್ಣೀರು ಹೆಚ್ಚಿ ಕಂಗಳಲ್ಲಿ ನೀರು ಕೆರೆಗಟ್ಟಿತು. ತುಸು ಹೊತ್ತಿನಲ್ಲಲಿ ಕೋಡಿ ಹರಿಯಿತು.

ಅದನ್ನು ಹೇಗೆ ಹೇಳುವುದು ? ಹೇಳುವುದರಿಂದ ಪ್ರಯೋಜನವಿಲ್ಲ ಎಂದು ತಿಳಿದು ತುಟಿಗಚ್ಚಿ..

"ಏನೂ ಇಲ್ಲ" ಎಂದು ಮತ್ತೆ ಧ್ವನಿಗೂಡಿಸಿದಳು.

ಹೆಚ್ಚಿಗೆ ಕೇಳುವುದರಲ್ಲಿ ಅರ್ಥವಿಲ್ಲವೆಂದು ತಿಳಿದು ಮಲುಹಣ ಸುಮ್ಮನಾದ. ಮತ್ತೆ ತಡೆಯಲಾರದೆ..

"ಬೇಸರವಾದರೆ ಕಣಿವೆಗಳತ್ತ ತಿರುಗಾಡಿಕೊಂಡು ಬರೋಣ ನಡೆ"

"ಆಗಲಿ ಹೋಗೋಣ"

ಎಂದು ಸಿದ್ಧಳಾದಳು.

ಇಬ್ಬರೂ ಪ್ರಕೃತಿ ಸೌಂದರ್ಯದಲ್ಲಿ ಮಿಲನ ಹೊಂದಿ ಎಲ್ಲಾ ಚಿಂತೆಗಳನ್ನು ಮರೆತು ವಿಹರಿಸಿದರು. ಆಮೇಲೆ ಮನೆಗೆ ಬಂದರು. ಪಾಪ ತಾಯಿಯ ಬಲವಂತ, ಆಕೆಯ ತಿರಸ್ಕಾರ, ಮಲುಹಣನಿಗೆ ಹೇಗೆ ಗೊತ್ತಾಗ ಬೇಕು ? ಅದು ಗೊತ್ತಾಗದಿರಬೇಕೆಂಬುದೇ ಮಲುಹಣೆಯ ಆಸೆಯಾಗಿತ್ತು. ಆದುದರಿಂದಲೇ ಆತನಲ್ಲಿ ಆ ಹೊಲಸನ್ನು ಹೇಳಲು ಇಷ್ಟಪಡಲಿಲ್ಲ. ಮಲುಹಣನು ಆಕೆಯನ್ನು ಹೆಚ್ಚಿಗೆ ಬಲವಂತ ಮಾಡಿ ಪ್ರಶ್ನಿಸುವ ಗೋಜಿಗೂ ಹೋಗಲಿಲ್ಲ. .

**********

ಮಲುಹಣೆಯು ದೂರದಲ್ಲಿ ಮಲುಹಣನ ರಥ ಬರುತ್ತಿದ್ದುದನ್ನು ಮಹಡಿಯ ಮೇಲೆ ನಿಂತು ಸಂತಸದಿಂದ ತನ್ನ ಕೋಣೆಗೆ ಓಡಿ ಹೋಗಿ ಮರೆಯಾಗಿ ಕುಳಿತಳು. ಆಕೆಯ ಕೋಣೆಯನ್ನು ಪ್ರವೇಶಿಸುತ್ತಿದ್ದಂತೆಯೇ ಮಲುಹಣ ಮುದ್ದುದನಿಯಲ್ಲಿ ಕೂಗಿದ..

"ಮಲುಹಣೀ...ಮಲುಹಣೀ.."

"...."

"ಏ ಕಳ್ಳೀ...ಇಲ್ಲೇ ಅವಿತು ನನಗೇ ಆಟವಾಡಿಸುತ್ತಿದ್ದೀಯಾ ? ಎಲ್ಲಿದ್ದರೂ ಬಿಡುವುದಿಲ್ಲ, ಅತಳ, ವಿತಳ, ರಸತಳ, ಪಾತಾಳದಲ್ಲಿದ್ದರೂ ಬಿಡೆ ಎಂಬುದು ಮಾತ್ರ ಜ್ಞಾಪಕವಿರಲಿ"

ಬಾಗಿಲ ಹಿಂದೆ ನಿಂತಿದ್ದುದನ್ನು ಮಲುಹಣೀ ನೋಡಿ ಕಿಸಕ್ಕನೆ ನಕ್ಕಳು.

"ಏಕೆ..?"

"ಏಕೆ ಅಂದ್ರೆ ಇಷ್ಟು ಬೇಗ ಹುಡುಕಿಬಿಟ್ರಲ್ಲಾ ಅಂತ"

"ಮೊದಲೇ ಹೇಳಿದ್ನಲ್ಲಾ, ಯಾವ ಲೋಕ ಹೊಕ್ಕರೂ ಬಿಡದವನು. ಈ ಭೂಲೋಕದಲ್ಲ ಅದರಲ್ಲೂ ಈ ಮನೆಯ ಕೋಣೆಯಲ್ಲಿರುವ ನನ್ನರ ಗಿಣಿಯನ್ನು ಹುಡುಕಲಾರನೇ ?

"ಅಂತು ಮಹಾ ಶೂರರೆಂದು ಮಾತಿನಿಂದ ವ್ಯಕ್ತವಾಯಿತು."

ಎಂದು ಬೆರಳಿಗೆ ಬೆರಳನ್ನು ಹೆಣೆದು ಕರೆದುಕೊಂಡು ಮಂಚದ ಮೇಲೆ ಕುಳಿತಳು. ಮಲುಹಣನ ದೃಷ್ಟಿ ಕೋಣೆಯ ಸುತ್ತಮುತ್ತ ಹರಡಿತು. ಮಲುಹಣಿ ಅದನ್ನು ಗ್ರಹಿಸಿ..

"ಯಾವಾಗ ಬಂದರೂ ನನ್ನ ಕೋಣೆಯನ್ನೇ ನೋಡುವುದೇ ಆಗುತ್ತದೆ ಏಕೆ ?" ಎಂದಳು.

"ನೋಡುವುದಷ್ಟೇ ಅಲ್ಲ. ಹೊಟ್ಟೆಯುರಿಯಾಗುತ್ತೆ"

"ಏಕೆ...?"

"ಅದರ ಸುಂದರತೆಯನ್ನು ನೋಡಿ ಕೃತಕ ವಸಂತಮಾಸವನ್ನೇ ಸೃಷ್ಟಿಸಿದ ಋತುರಾಣಿ ನೀನು."

"ಕೃತಕ ಎಂಬುದನ್ನೇಕೆ ಸೇರಿಸುತ್ತೀರಿ ? ವಸಂತ ಮಾಸದ ತದ್ರೂಪ ಮರು ವಸಂತ ಮಾಸ ಅನ್ನಿ."

"ಹಾಗೇ ಅಂದ್ರೆ ತಪ್ಪಲ್ಲ."

"ಬರೇ ಕಾಮಸೂತ್ರವನ್ನು ಅರಿತರೆ ಕಲೆಯಲ್ಲ"

"ಈ ಸುಂದರ ಕಲೆಗಳಲ್ಲಿ ಕಣ್ಣಿಟ್ಟು ನೋಡಬೇಕು, ಅಭ್ಯಾಸಿಸಬೇಕು, ಆಗ ತಾನೇ ಸರಿಹೋಗುತ್ತದೆ."

"ಅಂದ್ರೆ...?"

"ನೃತ್ಯ, ಸಂಗೀತ, ಶಿಲ್ಪಕಲೆಗಳಲ್ಲಿ ಆಸಕ್ತಿ, ಸುವಾಸನೆ ಪುಡಿಯನ್ನು ತಯಾರಿಸಿ ಮೈ ಕೈಗಳಿಗೆ ಲೇಪಿಸಿಕೊಳ್ಳುವುದು, ಕಸೂತಿ ಕೆಲಸ ಮಾಡುವುದು. ಮಾತು, ನಡೆ, ನುಡಿಗಳಲ್ಲಿ ಚಾಕಚಕ್ಯತೆ ತೋರುವುದು, ಬೇಟೆಯಾಡುವುದು, ಉತ್ತಮ ಕಲಾ ವಸ್ತು ಗಳನ್ನು ತಯಾರಿಸುವುದು, ಆಯುರ್ವೇದ ಭೋದಿಸುವುದು, ಪಾಕಶಾಸ್ತ್ರ ಅರಿಯುವುದು, ಭಾಷಗಳ ಪರಿಜ್ಞಾನ ಹೊಂದುವುದು, ಕವಿತೆ ಬರೆಯುವುದು, ಜೂಜಾಡುವುದರಲ್ಲಿ ಆಸಕ್ತಿ ತೋರುವುದು ಇನ್ನೂ ಮುಂತಾದವು. ಹಾಗಿದ್ದರೆ ತಾನೇ ರಸಿಕತೆ. ಬರೇ ಪ್ರೀತಿಸುವುದರಿಂದ ರಸಿಕ ಎನ್ನಲಾಗದು."

"ಹೌದು...ಇವನ್ನು ನಾನು ಕಾಮಶಾಸ್ತ್ರದಲ್ಲಿ ತಿಳಿದಿರುವೆ"

"ನಿಮ್ಮೊಂದಿಗೆ ಮಾತಾಡ್ತಾ ಇದ್ದರೆ ದಿವಸಗಳು ನಿಮಿಷಗಳಂತೆ, ಮಾಸ ಸಂವತ್ಸರಗಳಷ್ಟೇ ಚಿಕ್ಕವು."

"ಮಾತಿನಲ್ಲಿ ನಿನ್ನ ಉಡುಪನ್ನೇ ಮರೆತೆ?"

"ಇದು ಕರ್ಣಾಟಕದ್ದು."

"ನೀನು ಯಾವ ರಾಜ್ಯದ ಷೋಡಶಿ ಎಂಬುದೇ ತಿಳಿಯದಾಗಿದೆ"

"ನಾನು ಯಾವ ಯಾವಾಗ ಯಾವ ರಾಜ್ಯದ ಉಡುಪು ಧರಿಸುತ್ತೇನೆಯೋ ಆ ರಾಜ್ಯದ ಹೆಣ್ಣು ನಾನು. ಎಲ್ಲಾ ದೇಶದವಳಾಗಲೂ ನನಗೆ ಬಯಕೆ, ಎಲ್ಲರ ಸಂಸ್ಕೃತಿಯು ನನ್ನ ಅಲಂಕಾರದ ಸೊತ್ತು, ಭಾರತಾಂಬೆಯ ದೇಹ ಒಂದೇ ಆದರೆ ರಾಜ್ಯಗಳು ಹಲವು. ಆಕೆಯ ಭಾಷೆ ಹಲವಾದರೂ ಭಾಸ ಒಂದೇ ಹಾಗೆ.."

"ನೀನು ಭಾವೈಕ್ಯದ ಭಗಿನಿ, ನಿನ್ನ ಪಡೆದ ನಾನೇ ಧನ್ಯ"

"ನಮ್ಮಿಬ್ಬರ ಪ್ರೇಮ ಆ ಮಂಜಿನಂತೆ ಕರಗಿ ನೀರಾಗುವಂತ ನೋಡಿಕೊಳ್ಳಬೇಕು."

"ಕರಗಿ ನೀರಾದರೂ ಮತ್ತೆ ಅದು ಮಂಜಾಗಲೇಬೇಕು. ಹಾಗೆಯೇ ನಾವೂ ಸಹ"

"ಮಲುಹಣೇ...ನಮ್ಮಿಬ್ಬರ ಪ್ರೇಮ ಸಲ್ಲಾಪ ಹತ್ತು ವರ್ಷಗಳಿಂದಲೂ ಯಾವ ಅಡ್ಡಿ ಆತಂಕಗಳೂ ಇಲ್ಲದೆ ಹತ್ತು ನಿಮಿಷಗಳಂತೆ ಕಳೆದವು ಅಲ್ಲವೇ ?

ಎಂದು ಇಬ್ಬರೂ ಆಲಂಗಿಸಿಕೊಳ್ಳುತ್ತಿರಲು...

"ಮಲುಹಣೇ..ಎದ್ದು ಬಾರೇ..ನಿಮ್ಮ ಮಾವ ದ್ವೀಪಾಂತರದಿಂದ ಬಂದಿದ್ದಾನೆ, ದಿವ್ಯ ವಸ್ತ್ರಾಭರಣ ತಂದಿದ್ದಾನೆ, ನಿನ್ನನ್ನು ನೋಡಲಿಕ್ಕೆ ಬಾ"

ಈ ಧ್ವನಿಯು ಮಲುಹಣನ ಕರ್ಣಗಳನ್ನು ಭೇಧಿಸಿದವು. ಎದೆಯ ಏರಿಳಿತ ಭಾಸವಾಯಿತು. ಮಾತಾಡಲು ಬಾಯಿ ಬಾರದ ಹಾಗಾಯಿತು. ದೇಹ ಮುಟ್ಟಿದ ಮುನಿಯಂತಾಯ್ತು. ಸ್ವಲ್ಪ ಹೊತ್ತಿನಲ್ಲೇ.

ತಾಯಿ ಮಲುಹಣನೆದುರೇ ಹೀಗೆ ಅನ್ನುತ್ತಾಳೆಂದು ತಿಳಿದಿರಲಿಲ್ಲ. ಮಲುಹಣೆಗೆ. ಆಕೆಗೆ ಚಕ್ರದಂತೆ ತಲೆ ಸುತ್ತುತ್ತಿರಲು, ಕಂಗಳಲ್ಲಿ ನೀರು ಹರಿಯಲಾರಂಭಿಸಿತು. ಕೂಡಲೇ ಮೂಗಿನ ಹೊರಳೆಗಳು ಸಿಡಿದವು, ಹುಬ್ಬುಗಳು ಗಂಟಿಕ್ಕಿದವು.

ಮೆಲ್ಲನಿಯಲ್ಲಿ ಮಲುಹಣ

"ಮಲುಹಣೇ..." ಎಂದ.

ದುಃಖದಿದ ಮುಖವನ್ನು ಅತ್ತ ತಿರುಗಿಸಿಕೊಂಡಳು. ಕೂಡಲೇ ಸಮಾಧಾನ ತಂದುಕೊಂಡು ಮಲುಹಣ..

"ಮಲಹಣೇ ಜೀವನದಲ್ಲಿ ಮೂರು ನಿಮಿಷ ಹರುಷ ಮರು ನಿಮಿಷ ಬರೇ ವಿಷ, ಇದು ಸಹಜವಾಗಿ ನಡೆಯತ್ತದೆ. ಅದಕ್ಕೇಕೆ ಕಣ್ಣೀರು ಹಾಕಿಕೊಳ್ಳುತ್ತೀಯೆ ?"

ಗದ್ಗ ಬಿಗಿದ ಮಲುಹಣೆಯ ಕಣ್ಣಿಂದ ನೀರಿನ ಪ್ರತಿಕ್ರಿಯೆಯೊಂದೇ ಹೊರತು ಮತ್ತಾವ ಛಾಯೆಯೂ ಕಾಣಲಿಲ್ಲ.

ಮಲುಹಣನಿಗೆ ಕಂಗಳಲ್ಲಿ ನೀರು ತಡೆಯಲಾರದೆ ಹರಿಯಿತು. ತಲೆಯು ಚಕ್ರದಂತೆ ತಿರುಗಿತು. ಹಿಂದಿನ ದಿನ ತಂದೆಗೆ ಪ್ರವರಸೇನ ಮಹಾರಾಜರು ಹೇಳಿದ ಮಾತುಗಳು ಮತ್ತೆ ಕರ್ಣ ತಮ್ಮಟೆಯನ್ನು ತಾಗಿತು.

ಮತ್ತೊಂದು ಭಾವ..

"ತಂದೆಯವರು ಅದಕ್ಕೇ ನನಗೆ ಬೇಗ ಮದುವೆ ಮಾಡಿಬಿಡ ಬೇಕು ಎನ್ನುತ್ತಿದ್ದರು."

ಚಿಂತೆಯ ಭ್ರಾಂತಿಯಿಂದ ಕುಂದಿ ಮಲುಹಣನನ್ನು ನೋಡ ಮಲುಹಣೇ..

"ಮಲುಹಣಾ..ನಾನು ಆಕೆಗೆ ಸರಿಯಾಗಿ ಬುದ್ಧಿ ಕಲಿಸಿ ಬರುತ್ತೇನೆ. ಸುಮ್ಮನಿರಿ, ಆಕೆ ಕಡು ಪಾಪಿ, ಸುಖವೈರಿ"

"ಮಲುಹಣೇ...ಬೇಡ ತಾಯಿಯ ಹಂಬಲ ಏಕೆ ಮುರಿಯಬೇಕು?" ನನ್ನ ಯೌವನ ಮುಗಿಯಿತು. ನವಯೌವನ ಮಾವ ಬಂದಿರುವರು. ಹೊತ್ತಾದೀತು ಹೋಗು"

"ಮಲುಹಣಾ ಹಾಗೆಂದು ನನ್ನನ್ನು ದುಃಖಕ್ಕೀಡು ಮಾಡಬೇಡಿ ದೇವಾ"

"ಪಾಪ ನಿನ್ನ ದೇವ ಕಾದಿರುವನು ನಿನಗಾಗಿ ಹೋಗು. ಸುಂದರವಾದ ಬಣ್ಣಬಣ್ಣದ ಜೇನು ತುಂಬಿದ ಹೂಗಳನ್ನು ನೋಡಿ ದುಂಬಿ ಆಕರ್ಷಿತವಾಗಿ ಪರಾಗಗಳನ್ನಿಟ್ಟು ಸ್ಪರ್ಶಿಸುತ್ತದೆ. ಅಲ್ಲದೇ ಒಂದೇ ಹೂವಿನ ಜೇನಿಗೆ ಅದೆಷ್ಟೋ ದುಂಬಿಗಳು ಸ್ಪರ್ಶಿಸಿ ಜೇನು ಹೀರುತ್ತಿವೆಯೋ ಹಾಗೆಯೇ ನಿನಗೂ ಇನ್ನೆಷ್ಟು ಸ್ಪರ್ಶಗಳು ಕಾದಿವೆಯೋ ಹೋಗು ಹೋಗು ದುಂಬಿಗಳು ಹಾರಿ ಹೋದಾವು.ಇದರಿಂದ ನೀನು ನಿನ್ನ ತಾಯಿಗೆ ಮೋಸ ಮಾಡಿದಂತಾಗುವುದು ಹೋಗು. ನಾನು ನಿನ್ನ ಸುಖಕ್ಕೆ ಎಂದಿಗೂ ಅಡ್ಡಿ ಬರೋದಿಲ್ಲ."

ಎನ್ನುತ್ತಾ ಮಲುಹಣ ಮನೆಯನ್ನು ಬಿಟ್ಟು ಹೊರಟ.



ದಾರಿಯಲ್ಲಿ ಹೋಗುತ್ತಿರುವಾಗ ಮನಸ್ಸು ನಾನಾ ವಿಧವಾಗಿ ಲೆಕ್ಕ ಹಾಕಿತು. ಹುಚ್ಚನಂತೆ ಭ್ರಮಿಸತೊಡಗಿದ.

"ನನ್ನ ತಂದೆಯ ಆಸೆಯ ಗೋಪುರ ಉರುಳಿತು. ನನ್ನನ್ನು ಹಂಸತೂಲಿಕಾತಲ್ಪದಲ್ಲಿ ಮೆರೆಯುತ್ತಾನೆಂದು ತಂದೆ ಕಟ್ಟಿದ್ದ ಆಸೆಗಳು ಇಂದಿಗೆ ಮುಗಿಯುತು. ನಿತ್ಯ ಸಹಸ್ರ ಹೊನ್ನಿನಂತೆ ಖರ್ಚು ಮಾಡಿದರೂ ಖರ್ಚಾಗ ಬಾರದೆಂದು ಮೂರು ಕೋಟಿ ಅರವತ್ತು ಲಕ್ಷ ಹೊನ್ನನ್ನು ನನ್ನ ಸುಖಕ್ಕೆ ಇಟ್ಟು ಹೋದರು ಆದರೆ..."

ನಾನು ಪರದೇಶಿಯಾಗಿ ಸುತ್ತುವ ಭಾಗ್ಯ ತಪ್ಪಿತೇ ? ನಿಮ್ಮನ್ನೇ ನಂಬಿ ನನ್ನ ಐಸಿರಿಯನ್ನೆಲ್ಲಾ ಸುರಿದ ಮೇಲೆ, ನನ್ನ ಯೌವನ ತೀರಿದ ಮೇಲೆ ನಾನು ಪದ್ಮಾವತಿಗೆ ಆಕೆಯ ಮಗಳಿಗೆ ಬೇಡವಾದೆನೇ ? ಆಕೆಯನ್ನೇ ನಂಬಿ ಕುಳಿತಿದ್ದ ನನ್ನ ಗತಿಯೇನು ? ಮಲುಹಣೇ..ನೀನು ಏನು ಮಾಡುತ್ತೀಯೆ ? ಆಕೆ ನಿಮ್ಮ ತಾಯಿಯನ್ನಾದರೂ ಏಕೆ ಬಯ್ಯಬೇಕು? ಆಕೆಯ ಕುಲ ಅಂಥದ್ದು ಬೆಳೆಗೆ ಮಳೆ, ಗಿಳಿಗೆ ಪಂಜರ ಇರುವಂತೆ ಸೂಳೆಗೆ ಹಣಬೇಕು. ಆಮೇಲೆ ಹೆಣದಂತೆ ತಿರಸ್ಕರಿಸುವಳು. ಸೂಳೆಯನ್ನು ನಂಬುವುದರಿಂದ ಹಣ-ಪ್ರಾಣ ಎರಡೂ ನಷ್ಟ ಎಂಬ ಹಿರಿಯರ ನುಡಿ ಸತ್ಯ. ಕಾವ್ಯಗಳಲ್ಲಿ ಎಷ್ಟು ಓದಿಲ್ಲ ? ಆದರೂ ನಾನು ಈ ಕೂಪಕ್ಕೆ ಏಕೆ ಬಿದ್ದೆ ?

ದಾರಿ ಗುರಿಯಿಲ್ಲದ ಸಾಗಿತು. ಕಣಿವೆಯತ್ತ ಬಂದ. ಚಂದಿರನ ಬೆಳದಿಂಗಳು ಉದಯಿಸಿತು. ಝೀಲಂ ನದಿ ಕಲಕಲ ದನಿಯಿಂದ ಹರಿಯುತ್ತಿತ್ತು. ಅದರ ಪಕ್ಕದಲ್ಲಿ ಕುಳಿತ. ಮನಸ್ಸು ಏನೇನೋ ಯೋಚನೆಗೆ ಸಿಲುಕಿತು. ಕೂಡಲೇ ಮಲುಹಣೆಯ ರೂಪ ಎಲ್ಲೆಲ್ಲೂ ಸೃಷ್ಟಿಯಾದಂತೆ ಕಂಡಿತು.

"ಅಯ್ಯೋ... ವಿಧಿಯಾಟವೇ... ಮಲುಹಣೇ.. ಮಲುಹಣೇ... ಕೊಳದ ಕಮಲದಲ್ಲೂ, ನಿರ್ಜೀವ ವಸ್ತುಗಳಲ್ಲೂ ನಿನ್ನರಳಿದ ಮುಖದ

ಸಜೀವ ಪ್ರತಿಬಿಂಬ ನರ್ತಿಸುತ್ತಿದೆ. ಮಲುಹಣೇ ನೀನು ಮಾತ್ರ ನನ್ನವಳೇ. ನಾನು ನಿನ್ನವನೇ....ಈ ವಿರಹ ತಾಪದಿಂದ ನಾನು ಬಾಡಿ ಬಸವಳಿದು ಇರಲಾರೆ ಮಲಹಣೇ..."

"ಬಿಸಿಲ ತಾಪವನ್ನಾದರೂ ತಾಳಬಹುದು, ಬೆಂಕಿಯ ಕಾವನ್ನಾದರೂ ಸಹಿಸಬಹುದು, ಜ್ವರದ ಉಷ್ಣವನ್ನಾದರೂ ನುಂಗಬಹುದು, ಹಾವಿನ ವಿಷದ ಉರಿಯನ್ನಾದರೂ ಸಹಿಸಬಹುದು, ಆದರೆ ಈ ವಿರಹ ತಾಪ ಈ ಕೊರಯುವ ಮಂಜಿನಲ್ಲಿ ಮಲಗಿದರೂ ಇಂಗದು"

ಕುಂತಲ್ಲಿ, ನಿಂತಲ್ಲಿ, ನಾನು ಎಲ್ಲೆಲ್ಲಿ ಸುತ್ತುತ್ತೇನೆ ಅಲ್ಲಲ್ಲೂ ನಿನ್ನ ನಿಜ ರೂಪನ್ನು ಕಾಣುತ್ತಿದ್ದೇನೆ. ಎಲ್ಲೆಲ್ಲೂ ನೀನಿರುವಾಗ ನನಗೆ ನಿದ್ದೆಯೇ ಬರುತ್ತಿಲ್ಲ. ಮನದ ತುಂಬಾ ತುಂಬಿದ ನೀನು ತುಂಬಿ ನನ್ನನ್ನು ಬಾಧಿಸುತ್ತಿದ್ದೀಯೆ, ಹೀಗಿರುವಾಗ ನಾನೇನು ಮಾಡಲಿ ?

ದಾರಿಯಲ್ಲಿ ಯಾವ ಹೆಣ್ಣು ಸುಳಿದರೂ, ಮಲುಹಣೇ, ನೀನೇ ಎಂಬ ಭ್ರಮೆ ನನಗೆ. ಆದರೆ ಹತ್ತಿರ ನೋಡಿದರೆ ಆ ಆಸೆಯ ಅಲೆಯು ಇಳಿದು ಹೋಗುತ್ತಿದೆ.

"ಈಗ ನಾನು ಎಲ್ಲಿಗೆ ಹೋಗಲಿ ?ನನ್ನ ಮನೆ ನನ್ನದು ಎನ್ನುವುದು ಇನ್ನೆಲ್ಲಿದೆ? ನಿನ್ನನ್ನು..ಮರಳಿ ಆ ಮನೆಗೆ ಅದು ಹೇಗೆ ಸಾಧ್ಯವಾಗುತ್ತದೆ. ನೀನು ಸುಮ್ಮನಾದರೂ ನಿನ್ನ ತಾಯಿ ಮಿತ್ರರನ್ನೂ ಆಶ್ರಯಿಸಲೇ ? ನಾನು ಇದ್ದುದಕ್ಕೆ ಸಾರ್ಥಕವೇನು ? ಎಲ್ಲವನ್ನೂ ಸೂಳೆಗೆ ತೆತ್ತು ನಮ್ಮನ್ನು ಕೆಡಿಸಲು ಬಂದ ಎನ್ನುವುದಿಲ್ಲವೇ ? ಏನು ಮಾಡಲಿ ? ಹೇಗೆ ಬದುಕಲಿ? ಬೆಟ್ಟದಂಥ ಈ ವಿರಹತಾಪವನ್ನು ಹೊತ್ತು ಎಲ್ಲಿಗೆ ಹೋಗಲಿ ? ನನಗೆಲ್ಲಿ ಶಾಂತಿ ? ನೆಮ್ಮದಿ ? ಈ ಪ್ರಪಂಚದಲ್ಲೇ ಅಂಥ ಸ್ಥಳವಿಲ್ಲವೇನೋ ? ನಾವೇ ಸೃಷ್ಟಿಸಿಕೊಂಡರೆ ಸಾಧ್ಯ. ಹೇಗೆ ಸೃಷ್ಟಿಸಿಕೊಳ್ಳಲಿ ? ನಾನೇನು ಬ್ರಹ್ಮನೇ ?"

ಅದೊಂದು ದಿನ ಮಲುಹಣೇ ನೀನು ಏನು ಹೇಳಿದ್ದೆ ?

"ಧನವು ತೀರಿದರೂ ಮನವು ತೀರದು, ಮುಡಿದ ಹೂ ಬಿದ್ದರೂ ಅದರ ಪರಿಮಳ ಹೋಗದು. ನನಗೆ ಐಶ್ವರ್ಯ ನಶ್ವರ, ಬೇಕಿಲ್ಲ ಎಂದೆ.

ಆದರೆ ಇಂದು ಅದರ ಸಾರ್ಥಕತೆ ಆಗಲಿಲ್ಲ. ಪಾಪ ನೀನೇನು ಮಾಡು ತ್ತೀಯ? ನಿನಗೆ ಅಡ್ಡ ಬಂದಾಕೆ ನಿಮ್ಮ ತಾಯಿ"

ಮತ್ತೊಂದು ಮನಸ್ಸು

"ತನು, ಮನ, ಧನಗಳನ್ನೆಲ್ಲಾ ಅರ್ಪಿಸಿ ಹೀಗಾದ ಮೇಲೆ ಇನ್ನೇಕೆ ಆಕೆಯನ್ನು ನೆನೆಯಬೇಕು? ಸಂಪೂರ್ಣ ಕಾವ್ಯದಲ್ಲಿ ತಲ್ಲೀನನಾಗಬಾರದೇಕೆ? ಆಕೆಯ ಪ್ರೇಮ ಸಲ್ಲಾಪದಲ್ಲಿ ಸಾಹಿತ್ಯ ಸರಸ್ವತಿಯ ಭಂಡಾರಕ್ಕೆ ಸೇರಬೇಕಾ ಗಿದ್ದ ಅನರ್ಘ್ಯ ರತ್ನಗಳು ಇಲ್ಲದಂತಾಗಿ ನಿನ್ನ ವಿದ್ವತ್ತು ನಾಯಿಯ ಮೊಲೆಯ ಹಾಲಿನಂತೆ ವ್ಯರ್ಥವಾಯಿತು."

"ಹೌದು ಸತ್ಯ. ಆದರೆ ನಾನು ಏನು ಮಾಡಲಿ ? ಏನು ಮಾಡಬೇ ಕೆಂದರೂ ನನಗೆ ಹುಮ್ಮಸ್ಸಿಲ್ಲ ; ಶಕ್ತಿಯಿಲ್ಲ. ಆಕೆಯು ನನ್ನ ಮನದೊಳಗೆ, ಹೊರಗೆ ಅಡ್ಡಾಡಿ ಕಾಡಿಸುತ್ತಿದ್ದಾಳೆ. ಪೀಡಿಸುತ್ತಿದ್ದಾಳೆ. ಅವಳನ್ನು ಮರೆಯ ಬೇಕೆಂದು ಎಷ್ಟು ಮಾಡಿಕೊಂಡರೂ ನಿರ್ಜೀವ ವಸ್ತುಗಳಲ್ಲೂ ನಲಿದು ನರ್ತಿಸಿ, ಮಾದಕ ನಗುವಿನಲ್ಲಿ ನನ್ನನ್ನು ಕೊಲ್ಲುತ್ತಿದ್ದಾಳೆ. ಏನು ಮಾಡಲಿ ? ಹೇಗೆ ಮರೆಯಲಿ ? ಧ್ಯೇಯವನ್ನು ಹೇಗೆ ಸಾಧಿಸಲಿ ?"

"ಮನುಷ್ಯನಿಗೆ ಆತ್ಮ ಸಂಯಮ ಬೇಕು. ಅದಿಲ್ಲದಿದ್ದರೆ ಯಾವ ಕಾರ್ಯವನ್ನೂ ಸಾಧಿಸಲು ಆಗುವುದಿಲ್ಲ. ಹಿಂದೆ ಅದೆಷ್ಟು ಜನರು ಹೀಗೆ ವಿರಹ ತಾಪದಲ್ಲಿ ಬೆಂದು ಬಳಲಿದ್ದಾರೆ ?"

"ಸಾಮಾನ್ಯ ಜನರ ಸಾಲಿನಲ್ಲಿ ನೀನೇಕೆ ನಿಲ್ಲಬೇಕು ?"

"ಆದರೆ ಪ್ರೇಮವನ್ನಾದರೂ ಸಾಧಿಸಬಾರದೆ ? ಪ್ರೇಮಕ್ಕೆ ದೇಹ ವನ್ನು ವೇಶ್ಯೆಗೆ ಬಲಿತೆತ್ತ ನಾನು ಪ್ರೇಮಕ್ಕಾಗಿ ಬಾಳಬಾರದೇಕೆ ? ಭೂಲೋ ಕದಲ್ಲಿ ಈ ಕಾಶ್ಮೀರಿಗಳ ಪ್ರೇಮ ಚಿರಕಾಲ ನೆಲಸಲಿ, ಇಲ್ಲ ಮಲುಹಣೆ ಯನ್ನು ಮತ್ತೆ ಪಡೆಯಬೇಕು, ಮರಳಿ ಪಡೆಯುವೆ, ಬಾಳುವೆ ಎಂಬ ನಂಬಿಕೆ ನನ್ನಲ್ಲಿ ಬೇರೂರಿದೆ ಮಲುಹಣೇ...ಈ ಸಾಧನೆಗೆ ನೀನು ನೆರವಾಗು, ನೆರವಾಗ ಲೇಬೇಕು. ಈ ನಮ್ಮಿಬ್ಬರ ಪ್ರೇಮ ಬಂಧನ ಮತ್ತೆ ಆರಂಭವಾಗಲೇಬೇಕು.

ನಮ್ಮ ಚಿರ ಪ್ರೇಮ ನಿರಂತರವಾಗಿ ಜನದ ಮನದ ಮೇಲೆ ಅಚ್ಚಳಿಯದಂತ ನಿಚ್ಚಳವೂ ನಿಲ್ಲಬೇಕು. ಇದೇ ನನ್ನ ಆಸೆ, ಆಕಾಂಕ್ಷೆ, ಸಂಕಲ್ಪ ನನ್ನನ್ನು ಬೇಗನ ಕೂಡಿಕೋ ಮಲುಹಣೇ...

ದಿನಗಳುರುಳಿದವು.

ಅಂದು ವೈಶಾಖದ ಬಿಸಿಲು. ನೆತ್ತಿಯನ್ನು ಸೀಳುವಷ್ಟು ಬಿಸಿಲು. ಮಲುಹಣನು ಬೀದಿ ಬೀದಿಯನ್ನು ಸುತ್ತಾಡಿ ಬೆವತು ತಾಪವನ್ನು ಪರಿಹರಿ ಸಿಕೊಳ್ಳಲು ಮರದ ಕೆಳಗೆ ಕುಳಿತ. ಬಾಯಾರಿಕೆಯಾಯಿತು. ಪಕ್ಕದ ಕೊಳ ದಲ್ಲಿ ನೀರು ಕುಡಿಯಲು ಹೊರಟ. ಮುಖ ಕೈಕಾಲು ತೊಳೆದು ಒಂದು ಬೊಗಸೆ ನೀರನ್ನು ತೆಗೆದುಕೊಂಡು ಕುಡಿಯಲೇಕು ಎನ್ನುತ್ತಿಂದ್ದಂತೆಯೇ ಮೇಲಿಂದ ಕಾಗೆಯೊಂದು ಹಿಚುಕು ಹಾಕಿತು.

"ದೇವರು ಒಂದು ತೊಟ್ಟು ನೀರು ಕುಡಿಯಲೂ ಅಡ್ಡಿಮಾಡುತ್ತಿದ್ದಾನೆ"ಎಂದು ಆಚೆ ಎಸೆದು ಕೈ ತೊಳೆದುಕೊಂಡು ಮತ್ತೆ ನೀರು ಕುಡಿಯಲು ಮನಸ್ಸಾಗಲಿಲ್ಲ. ಕಂಡು ಕಂಡು ಕುಡಿಯುವುದಾದರೂ ಹೇಗೆ ? "ಗಂಗೆಗೆ ಕಟ್ಟಿಲ್ಲ, ಲಿಂಗಕ್ಕೆ ಮುದ್ರೆಯಿಲ್ಲ" ಎಂಬುದೇನೋ ಸರಿ, ಆದರೆ ಏಕೋ ನನಗೆ ಹಿಡಿಸುತ್ತಿಲ್ಲ ಎಂದು ಬಟ್ಟೆಯಿಂದ ಕೈ ಕಾಲುಗಳನ್ನು ಒರಸಿಕೊಂಡು ಮರದ ನೆರಳಿನಲ್ಲಿ ಹಾಗೆಯೇ ಮಲಗಿದ ನಿದ್ರಾದೇವಿ, ತಿಪ್ಪೆ ಉಪ್ಪರಿಕೆಗಳಲ್ಲಿದ್ದರೂ ಬಿಡಳು ಎಂಬುದು ಸಹಜ. ಮೊದಲೇ ಹೊಟ್ಟೆಗಿಲ್ಲ, ಬಿಸಿಲ ತಾಪ, ಬೀದಿ ಬೀದಿ ತಿರುಗಿ ಆಯಾಸ ಇವೆಲ್ಲಾ ಸೇರಿ ನಿದ್ದೆ ಬೇಗ ಬಂತು. ಎರಡು ಮೂರು ತಾಸು ಆನಂದವಾಗಿ ನಿದ್ದೆಗೈದ. ಮಧ್ಯಾಹ್ನದ ಬಿಸಿಲು ಸ್ವಲ್ಪ ಕಡಿಮೆಯಾಗುತ್ತಾ ಬಂತು. ಮಲಗಿ ಬೆವತಿದ್ದ ದೇಹಕ್ಕೆ ಸ್ವಲ್ಪ ಗಾಳಿ ಬೀಸಿ ಬೆವರನ್ನು ಆರಿಸಿ ದೇಹವನ್ನು ತಂಪು ಮಾಡಿತು. ನಿದ್ದೆಯಿಂದ ಎಚ್ಚೆತ್ತ, ಹೊಟ್ಟೆ ಬೆನ್ನಿಗಂಟಿತ್ತು. ತುಟಿಗಳೊಣಗಿ ದ್ರಾಕ್ಷಿಯಾಗಿದ್ದವು. ನಾಲಿ ಗೆಯು ಬೆಂಡಾಗಿ ಮಾತಾಡಲು ಶಕ್ತಿ ಉಡುಗಿಹೋಗಿತ್ತು. ಈ ಹಸಿವನ್ನು ನೀಗುವುದು ಹೇಗೆ ? ಅನ್ನಕ್ಕೆ ಯಾರನ್ನು ಕೈಯೊಡ್ಡುವುದು? ಎಂಬ ಚಿಂತೆ ಯಾಯಿತು, ಪ್ರೀತಿಸಿದವಳನ್ನು ನೋಡಿಯಾಯಿತು, ಇನ್ನು ಮುಂದೆ.."

ಪ್ರವರಸೇನ ಮಹಾಪ್ರಭುಗಳ ಮನೆಗೆ ಏಕೆ ಹೋಗಬಾರದು ? ಹ್ಞಾಂ. ಈ ಸ್ಥಿತಿಯಲ್ಲಿ ನಾನು ಅರಮನೆಗೆ ಹೋಗುವುದೇ ? ಪ್ರವೇಶಕ್ಕಾದರೂ ಅವಕಾಶವಿದೆಯೇ? ಕಾವಲುಗಾರ ಬಿಡುತ್ತಾನೆಯೋ, ಅಟ್ಟಿ ಬಿಡುವುದಿಲ್ಲವೇ ? ಭಿಕಾರಿ, ಭಿಕ್ಷುಕ ಎಂದು ಕಡೆಗಣಿಸಿ ತುಚ್ಛತೆಯಿಂದ ನೋಡುವುದಿಲ್ಲವೇ ? ಈಗೇನು ಮಾಡಲಿ ? ಅಧ್ಯಕ್ಷನಾಗಿ ಇದ್ದವನ ಮಗನು ಭಿಕ್ಷೆಯ ಅನ್ನಕ್ಕಾಗಿ ಅರಮನೆಗೆ ಹೋಗುವುದೇ ? ಪ್ರವರಸೇನ ಮಹಾರಾಜರಾದರೂ ನನ್ನ ವರ್ತನೆಗೆ ಅಸಹ್ಯ ಪಟ್ಟುಕೊಳ್ಳುವುದಿಲ್ಲವೇ ?

ಎಂದು ಮೆಲ್ಲಮೆಲ್ಲನೆ ಅಡಿಯಿಡುತ್ತಾ ಹೊರಟ. ಆಗಲೇ ಸಾಯಂಕಾಲವಾಗಿತ್ತು. ಅರಮನೆಯ ದ್ವಾರದ ಹತ್ತಿರ ಬಂದ. ದೂರದಿಂದ ಕಹಳೆಯ ಶಬ್ದ ಕೇಳಿತು. ಪ್ರಭುಗಳು ಬರುವಿಕೆ ತಿಳಿಯಿತು. ಇನ್ನೂ ನಾನು ಈ ಸ್ಥಿತಿಯಲ್ಲಿರುವುದೇ? ಹೊರಟುಬಿಡಬೇಕು ಎಂದು ಅಲ್ಲಿಂದ ದಡದಡನೆ ಹೊರಟಿಯ. ಕೊಳದಿಂದ ನೀರು ತೆಗೆದು ಕೊಂಡು ಹೋಗುತ್ತಾ ಹೆಂಗಸರು ತಮ್ಮಲ್ಲೇ ಮಾತನಾಡಿಕೊಂಡು ಹೋಗುತ್ತಿದ್ದರು.

"ಮತ್ತೆ ಸೂಳೆಯರ ಸಹವಾಸ ಮಾಡಿದವರ ಗತಿಯೇ ಅಷ್ಟು".

"ಪಾಪ ಹೇಗಾಗೋಗಿದಾನೆ ನೋಡಿ"

"ಅನುಭೋಗಿಸಲಿ ಬಿಡು" ಮತ್ತೊಂದು ಧ್ವನಿ.

ಕೊನೆಗೆ ಬರುತ್ತಿದ್ದ ಹೆಂಗಸನ್ನು,

"ಅಮ್ಮ ಸ್ವಲ್ಪ ನೀರು ಬಿಡಿ ಕುಡಿಯಬೇಕು"

ಎನ್ನಲು ಆಕೆ ಕೆಳಕ್ಕಿಡುತ್ತಿದ್ದಂತೆಯೇ ಮಡಿಕೆ ಜಾರಿ ಒಡೆಯಿತು.

"ಥೂ ನಾನೆಂಥ ಅನಿಷ್ಟದವನು ?" ಎಂದು ಕಣ್ಣೀರನ್ನು ಸುರಿಸುತ್ತಾ ವಿಜಯೇಶ್ವರನ ದೇವಾಲಯದತ್ತ ಬಂದು ಕುಳಿತ. ಕಂಬನಿದುಂಬಿಕೊಂಡು ಕೈ ಮುಗಿದು...

"ವಿಜಯೇಶ್ವರಾ ಏಕಪ್ಪಾ ನನ್ನನ್ನು ಪರೀಕ್ಷೆ ಮಾಡುತ್ತಿದ್ದೀಯೇ ? ನನ್ನನ್ನು ಈ ಅನಿಷ್ಟಗಳಿಂದ ಬೇಗ ಪಾರು ಮಾಡು"

ಎನ್ನುತ್ತಿದ್ದಂತೆಯೇ ಪೂಜಾರಿ ಪಂಚಾಮೃತವನ್ನು ತಂದು

"ತೆಗೋಪ್ಪ..." ಎಂದ.

ಅದನ್ನು ಎರಡು ಕೈಗಳಿಂದಲೂ ತೆಗೆದುಕೊಂಡು ಗಬಗಬನೆ ತಿಂದ. ಆ ಸ್ವಲ್ಪ ಪ್ರಸಾದವೇ ಆತನಿಗೆ ಹೊಟ್ಟೆ ತುಂಬಿಸಿತ್ತು. ಹಾಗೆಯೇ ಆ ರಾತ್ರಿ ಆನಂದವಾಗಿ ನಿದ್ರೆ ಮಾಡಿದ. ಬೆಳಿಗ್ಗೆ ಎದ್ದು ಕೊಳದಲ್ಲಿ ಮುಖ ತೊಳೆದು ಕುಳಿತ. ಮತ್ತೆ ಮನಸ್ಸು ನಾನಾವಿಧವಾಗಿ ಚಿಂತಿಸಿತು.

"ಮಲುಹಣೇ...ನಿನ್ನಂಗ ಸಂಗವನ್ನು ಹೇಗೆ ಮರೆಯಲಿ ? ಮಂಜು ಹೆಪ್ಪುಗಟ್ಟಿದ್ದ ಕಾಲದಲ್ಲಿ ನಿನ್ನಪ್ಪುಗೆ ಇತ್ತ ಶಾಖ, ತಂಗಾಳಿ ಹೊಡೆ ದಿದ್ದಾಗ ನಿನ್ನಂಗ ಸಂಗ ಕೊಟ್ಟ ಕಾವು, ಹಿಮವು ಬೀಳುವಾಗ ನಿನ್ನೆದೆಯಿತ್ತ ಉಷ್ಣ ಅದೆಷ್ಟು ಹಿತವಾಗಿತ್ತು ? ಋತು ಋತುಗಳೂ ವಸಂತವಾಗಿ ನಿನ್ನ ನನ್ನ ಪ್ರೇಮ ಸತತವಾಗಿ ಅದೆಷ್ಟು ಸುಗಮವಾಗಿ ಸಾಗುತ್ತಿತ್ತು ? ಆ ಸುಖಗಳನ್ನು ಮರೆಯುವುದಾದರೂ ಹೇಗೆ ? ಚಳಿಗಾಲದಲ್ಲಿ ನಿನ್ನ ದೇಹವಿತ್ತ ಸುಖ. ಬೇಸಿಗೆಯಲ್ಲಿ ನಿನ್ನಂಗಾಂಗವಿತ್ತತಂಪು, ಮಳೆಗಾಲದಲ್ಲಿ ಅಗ್ಗಿಷ್ಟಿಕೆ ಹೊದ್ದಿಗೆಯ ಶಾಖಕ್ಕಿಂತಲೂ ನಿನ್ನಪ್ಪಿದ ಶಾಖ ಅದೆಷ್ಟು ಬೆಚ್ಚನೆ ಮಾಡಿ ತ್ತು? ಅದನ್ನು ಈಗಲೂ ಬಯಸುತ್ತೇನೆ. ಮನಕ್ಕೆ ರಸೋಲ್ಲಾಸವನ್ನಿತ್ತ ದಿನಗಳು ನನ್ನ ಮನಸ್ಸು ಭಯಸುತ್ತದೆ. ನಿನ್ನ ತುಟಿಯ ಜೇನಿಗೆ ನನ್ನ ನಾಲಿಗೆಯು ಕಾತರಿಸುತ್ತದೆ. ನಿನ್ನ ಸುಗಂಧದುಸಿರನ್ನು ಘ್ರಾಣಿಸಲು ನಾಸಿಕ ಸಂಪುಟಗಳು ವಿಕಾಸವಾಗುತ್ತಿವೆ. ನೀನು ನುಡಿಸುತ್ತಿದ್ದ ವೀಣೆ ನನ್ನ ಕಿವಿಯಲ್ಲಿ ಇನ್ನೂ ಗುಂಯ್‌ಗುಟ್ಟುತ್ತದೆ. ನಿನ್ನ ನೃತ್ಯ, ಸುಂದರ ರೂಪ ಸದಾ ಕಂಗಳಲ್ಲಿ ಕುಣಿದಾಡುತ್ತಿದೆ. ನಿನ್ನಂಗದ ಸ್ಪರ್ಶವನ್ನು ನನ್ನ ಚರ್ಮ ಬಯಸುತ್ತದೆ.

ನಿನ್ನನ್ನು ನೋಡುತ್ತಿದ್ದರೆ ಪರಸ್ಪರ ಪ್ರೀತಿ ಅಭಿಲಾಷೆ ಬೆಳೆಯುತ್ತದೆ ಅಭಿಲಾಷೆ ಹೆಚ್ಚಿದಂತೆ ಚಿತ್ತವು ಆಸಕ್ತಿ ಹೊಂದಿ ಚಿಂತಿಸುತ್ತದೆ. ಚಿಂತೆಯು ವರ್ಧಿಸುತ್ತಾ ಮನಸ್ಸಿನಲ್ಲಿ ನೆನಪು ಮಾಡಿ ತನ್ನ ಸ್ವಾಧೀನಕ್ಕೆ ಮಾಡಿಕೊಳ್ಳಬೇ ಕೆಂದು ಸಂಕಲ್ಪ ಮಾಡು ವಂತಾಗುತ್ತದೆ. ಸಂಕಲ್ಪ ಮಾಡಿದ ಮೇಲೆ ಬಾಹ್ಯ ಪ್ರಪಂಚದ ಸಂಬಂಧವಿಲ್ಲದೆ ಗುಣ ಕೀರ್ತನೆ ಮಾಡುತ್ತಾ ಜಾಗರಣೆ ಮಾಡ

ಬೇಕಾಗಿದೆ. ಜಾಗರಣೆ ಮಾಡುತ್ತಾ ಉದ್ವೇಗಗೊಂಡು ನಿದ್ರೆ, ನೀರಡಿಕ ಇಲ್ಲದೆ ಕೃಶನಾಗುತ್ತಿದ್ದೇನೆ. ನಿನ್ನ ಯೋಚನೆಯಿಂದ ಸೊರಗುತ್ತಾ ಹೊಂದಿಕೆ ತಪ್ಪಿ ಪ್ರಲಾಪಿಸುತ್ತಿದ್ದೇನೆ. ಪ್ರಲಾಪಿಸುತ್ತಾ ಬಾಹ್ಯ ವಸ್ತುಗಳ ಮೇಲೆ ವಿಷಯಗಳ ಬಗ್ಗೆ ಅಭಿರುಚಿಯುಂಟಾಗುತ್ತಾ ಲಜ್ಜೆ ಹೆಜ್ಜೆದೆಗೆಯುವಂತಾಗಿದೆ. ಲಜ್ಜೆ ತೊರೆಯುತ್ತಾ ಮನೋರೋಗವು ಪೀಡಿತವಾಗಿದೆ. ಮನೋರೋಗದಿಂದ ಮೂರ್ಛೆ ಹೊಂದುವಂತೆಯೂ ಆಗಿದೆ. ಇದು ಇನ್ನೂ ಹೆಚ್ಚಿದರೆ ಮರಣವೇ ಕೊನೆಗೆ ಶರಣು ಎನ್ನುವಂತಾಗಿದೆ. ಮಲುಹಣೇ ಈ ಅವಸ್ಥೆಗಳೆಲ್ಲಾ ನನ್ನಲ್ಲಿ ಆಗಿಹೋಗಿದೆ. ವಿರಹದ ಒಂಭತ್ತು ಸ್ಥಿತಿಗಳೂ ಆವರಿಸಿ ನನ್ನನ್ನು ಚಿಂತಾಕ್ರಾಂತನನ್ನಾಗಿ ಮಾಡಿದೆ.

ರಾತ್ರಿ ಮಲಗಿದ್ದಾಗಲೆಲ್ಲಾ ನೀನು ನನ್ನ ಪಕ್ಕದಲ್ಲೇ ಇರುವೆ ಎಂಬ ಭಾವನೆ ಇನ್ನೂ ಹೋಗಿಲ್ಲ. ಕೈಯಾಡಿಸಿದಾಗ ನೀನಿಲ್ಲ ಎಂಬ ನೆನಪು ಆಗುತ್ತದೆ. ನೀನು ನನ್ನ ತೋಳಮೇಲೆ...ಕೆನ್ನೆಯಿಟ್ಟು ನನ್ನನ್ನೇ ಎವೆಯಿಕ್ಕದೆ ನೋಡುವಂತೆ ಭಾಸವಾಗಿತ್ತು. ಬೆರಳುಗಳು ನಿನ್ನ ನುಣ್ಣಗಿನ ಮೈ ಸ್ಪರ್ಶಿಸಿದಂತಾಗುತ್ತದೆ. ನಿನ್ನ ಸವಿಗೆನ್ನೆಯನ್ನು ಚುಂಬಿಸಿದಂತೆ ಭಾಸವಾಗುತ್ತದೆ. ನಿನ್ನೊಡಗೂಡಿ ಸುಖಪಡುತ್ತಿರುವೆ ಎಂಬ ಭಾವನೆ. ಆದರೆ ಇವೆಲ್ಲಾ ನಿಜವಾದ ಮಲುಹಣೆಯಿಂದಲ್ಲ, ಆಗುತ್ತಿರುವ ಸುಖ, ಕನಸಿನ ಲೋಕ. ಹಿಂದಿನ ದಿನಗಳ ಸವಿ ನೆನಪು.

ಇತ್ತೀಚೆಗೆ ಮಲುಹಣನಿಗೆ ನಾಸ್ತಿಕ ಲಕ್ಷಣಗಳು ತುಂಬಿ ಬೀದಿಯ ಭಿಕಾರಿಯಂತೆ ತಿರುಗಾಡುತ್ತಾದ್ದಾನೆ. ಪ್ರಪಂಚ ಅದೆಷ್ಟೋ ವಿಶಾಲವಾಗಿದ್ದರೂ ಮಲುಹಣನ ಪ್ರಪಂಚ ಮಲುಹಣೆಯೊಬ್ಬಳಿಂದಲೇ ತುಂಬಿದೆ ಎಂಬ ಭಾವನೆ ಮಾತ್ರ ತುಂಬಿದಂತೆ ಆತನಿಗೆ.

ಮತ್ತೊಂದು ದಿನ ದಾರಿಯಲ್ಲಿ ಒಬ್ಬನೇ ತಿರುಗಾಡುತ್ತಿರಲು ಇದ್ದಕ್ಕಿದ್ದಂತೆ ಕಹಳೆಯ ಶಬ್ದ ಕಿವಿಗೆ ಬಿತ್ತು. ಪ್ರವರಸೇನ ಮಹಾಪ್ರಭುಗಳು ದಯಮಾಡಿಸುತ್ತಿದ್ದರೆಂಬುದು ಆತನಿಗೆ ಖಚಿತವಾಯಿತು.

"ಈ ಸ್ಥಿತಿಯಲ್ಲಿ ನನ್ನನ್ನು ನೋಡಿದರೆ ಗತಿ. ತಂದೆಯ ಸಂಕಲ್ಪ ಎಂದು ಹೊರಟು ಕೊನೆಯಲ್ಲಿ ಬರುತ್ತಿದ್ದ ಪ್ರವರಸೇನ ಮಹಾರಾಜರು ಆತನನ್ನು ದೂರದಿಂದ ನೋಡಿ ಮಲುಹಣನೆಂದು ಗ್ರಹಿಸಿ ಸೇವಕರನ್ನು ನಿಲ್ಲುವಂತೆ ಹೇಳಿದರು.

"ಅಲ್ಲಿ ಕುಳಿತಿರುವವನ್ಯಾರು ?" ಎಂದರು.

"ಮಲುಹಣ ಪ್ರಭೂ."

ಆತನ ವಿಚಾರವನ್ನು ಮಹಾಪ್ರಭುಗಳಿಗೆ ಸೇವಕರು ಉಸುರಿದರು.

"ಆತನನ್ನು ಕರೆದುಕೊಂಡು ಬನ್ನಿ."

"ಆಗಲಿ ಮಹಾಪ್ರಭೂ" ಎಂದು ಓಡಿದರು ಕೆಲವರು. ಅವರು ಬರುತ್ತಿರುವುದನ್ನು ದೂರದಿಂದ ನೋಡಿ ಓಡಲಾರಂಭಿಸಿದ. ಪ್ರಭುಗಳು ಅದನ್ನು ಗಮನಿಸಿ ಮನದಲ್ಲೇ ತುಸು ಹೊತ್ತು ಚಿಂತಿಸಿದರು.

ಸೇವಕರು ಆತನನ್ನು ಕರೆತರಲಾಗದೆ..

"ಪ್ರಭು ಆತ ಬರುವುದಿಲ್ಲವಂತೆ ಹುಚ್ಚನಂತೆ ಓಡಿಹೋದ."

"ಸರಿ ನಡೆಯಿರಿ" ಎಂದು ಪ್ರಭುಗಳು ಹೊರಟರು.

ಮಲುಹಣ ಪ್ರಭುಗಳು ಹೋದುದನ್ನು ನೋಡಿ ಸಂತೋಷದಿಂದ ಊರು ಸುತ್ತುವ ಕಾರ್ಯದಲ್ಲಿ ನಿರತನಾದ.

❋❋❋❋❋❋❋❋

ಪದ್ಮಾವತಿ ಮಲುಹಣನ ಮನೆಯನ್ನು ಆಕ್ರಮಿಸಲು ಬಂದಳು.

ಮನೆಯು ನಿಶ್ಯಬ್ದವನ್ನಪ್ಪಿತ್ತು. ಕೇಶವಭಟ್ಟರು ಮಲುಹಣನ ಚಿಂತೆಯಲ್ಲಿ ಕುಳಿತಿದ್ದರು.

"ಮನೆಯಲ್ಲಿ ಯಾರು ?' ಗಡಸು ದನಿಯಲ್ಲಿ ಗುಡುಗಿದಳು. ಅಗ್ಗಿಷ್ಟಿಕೆಯಲ್ಲಿ ಬೆಂಕಿ ಕಾಯುತ್ತಾ ಕುಳಿತಿದ್ದು ಆ ದನಿಯನ್ನು ಕೇಳಿದ ಕೂಡಲೇ,

"ಯಾರು ಬೇಕಾಗಿತ್ತು ?" ಎಂದರು.

"ಮನೆಯಲ್ಲಿ ಯಾರಿದ್ದಾರೆ ?"ಪದ್ಮಾವತಿಯ ಪ್ರಶ್ನೆ.

"ಮನೆಯಲ್ಲಿ ಯಾರಿದ್ದಾರೆ? ಎಂದರೆ, ನಾನೇ ಇದ್ದೀನಲ್ಲಾ ? ಮತ್ತಾರು ಬೇಕು?"

"ಮನೆಗೆ ಬೀಗ ಹಾಕಬೇಕಾಗಿತ್ತು"

"ಏಕೆ ನಾನಿದ್ದೀನಲ್ಲಾ ?"

"ನೀನಿರಬಹುದು ನಮ್ಮ ಮನೆಯನ್ನು ನಾವು ಭದ್ರಪಡಿಸಿಕೊಳ್ಳ ಬಾರದೇನು?"

"ನೀವ್ಯಾರು ?"

"ನಾನು ಪದ್ಮಾವತಿ"

"ಮಲುಹಣೆಯ ತಾಯಿ"

"ಹೌದು"

"ಇರಬಹುದು"

"ಮನೆ ನನ್ನದು"

"ಮಲುಹಣರಲ್ಲವೇನು ? ಅವರು ಬಂದುಬಿಡು ಎನ್ನದೇ ನಾನು ಹೇಗೆ ಬಿಡಲಿ?"

"ಅವನೆಲ್ಲಿದ್ದಾನೆ ? ಇನ್ನೆಲ್ಲಿಗೆ ಬರುತ್ತಾನೆ ? ನನ್ನ ಹೆಸರಿಗೆ ಎಲ್ಲಾ ಕೊಟ್ಟಿದ್ದಾನೆ"

"ಇದೇನು ನೀವು ಹೇಳುತ್ತಿರುವುದು ?"

"ನಾನು ನಿಮ್ಮೊಂದಿಗೆ ಮಾತಾಡಲಿಕ್ಕೆ ಬಂದಿಲ್ಲ, ಮನೆಯನ್ನು ಸ್ವಾಧೀನಪಡಿಸಿಕೊಂಡು ಹೋಗಲಿಕ್ಕೆ ಬಂದಿದ್ದೇನೆ"

"ಈ ರೀತಿಯಲ್ಲಿ ಮಾತಾಡುವುದು ಬಹಳ ಅನ್ಯಾಯ"

"ನೀನೇನೂ ನ್ಯಾಯಕ್ಕೆ ಬರಬೇಡ ನಡೆಯಯ್ಯಾ"

"ಅವರು ಬಂದು ಬಿಡು ಅನ್ನುವತನಕ ನಾನು ಬಿಡೋಲ್ಲ"

ಪದ್ಮಾವತಿ ತನ್ನ ಜೊತೆಯಲ್ಲೇ ಕರೆತಂದಿದ್ದ ಮೀಸೆಯ ಕಾವಾಲ್ ನನ್ನು ಕುರಿತು..

"ಕಾಪಾಲ್ ಈತನನ್ನು ಎಳೆದುಬಿಟ್ಟು ಬೀಗಮುದ್ರ ಮಾಡ, ಈತ ಒಳ್ಳೇ ಮಾತಿಗೆ ಬಗ್ಗೋಲ್ಲ".

ಆತನು ಭಯಂಕರ ದೇಹದ ಹೆಜ್ಜೆ ಇಟ್ಟು ರಟ್ಟೆಯನ್ನು ಹಿಡಿದು ಆಚೆಗೆ ದರದರನೆ ಎಳೆದು ರೊಪ್ಪನೆ ಬಿಸಾಡಿದ. ಪದ್ಮಾವತಿಯು ಬೀಗ ಹಾಕಿದಳು. ಭಟ್ಟರು ಥರಗುಟ್ಟುತ್ತಾ ನೋವನ್ನು ಸಹಿಸಿಕೊಂಡು, ಇನ್ನು ಹೆಚ್ಚಿಗೆ ಮಾತನಾಡುವುದರಿಂದ ಪ್ರಯೋಜನವಿಲ್ಲವೆಂದು ಎದ್ದು ಹೊರ ಟರು. ಪದ್ಮಾದೇವಿ ತಮ್ಮ ಮನೆಗೆ ಸಂತೋಷದಿಂದ ಹೊರಟಳು. ಮಲು ಹಣನ ಸ್ಥಿತಿಯು ಇನ್ನೆಷ್ಟು ಚಿಂತಾಜನಕವಾಗಿದೆಯೋ ಎಂದು ಯೋಚಿ ಸುತ್ತಾ ಕೇಶವಭಟ್ಟರು ನಡೆದರು.

ಮಲುಹಣ ಹುಚ್ಚನಂತಾಗಿ ತನ್ನ ಮನೆಯಲ್ಲಾದರೂ ಹೋಗಿ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳೋಣ ಎಂದು ಬಂದ. ಮನೆಯ ಹೊರಬಾಗಿಲು ಬೀಗ ಮುದ್ರೆಯಾಗಿತ್ತು. ಎದೆಯು ಹೊಡೆದುಹೋದಂತಾಯಿತು. ಕಾವಲಗಾರನು ನೋಡುತ್ತಾ ನಿಂತಿದ್ದ ಆ ದಪ್ಪ ವ್ಯಕ್ತಿಯನ್ನು ಕುರಿತು

"ಏನು ?ಏನು ಬೇಕಾಗಿತ್ತು "

"ನನ್ನ ಮನೆಗೆ ಬೀಗ ಏಕೆ ಹಾಕಿದ್ದೀಯೆ ?"

" ಅಯ್ಯೋ ಹುಚ್ಚ...ಇದು ನಿನ್ನ ಮನೆಯೇ...ಪದ್ಮಾವತಿಯದು.."

"ಇಲ್ಲ...ನನ್ನದು.."

"ಇನ್ನೆಂಥ ...ನಿನ್ನದು..ನಡೆ...ನಡೆ.."

"ಮಾತಿಲ್ಲದೆ ಅಲ್ಲಿಂದ ಹೆಜ್ಜೆ ಇಡುತ್ತಾ ಕೇಶವಭಟ್ಟರ ಗತಿ ಏನಾ ಯಿತೋ ಎಂದು ಯೋಚಿಸುತ್ತಾ ಹೊರಟ. ದೂರದಲ್ಲಿ ಯಾವುದೋ ವ್ಯಕ್ತಿ ಹೋಗುತ್ತಿದ್ದುದು ಕಂಡಿತು. ಅದು ಹಿಂದೆ ನೋಡಿದ ವ್ಯಕ್ತಿಯಂತೆ ಕಂಡಿತು. ಆದರೂ ಖಚಿತವಾಗಲಿಲ್ಲ. ಹತ್ತಿರ ಬರಲು ಕೇಶವಭಟ್ಟರು ಎಂದು ವ್ಯಕ್ತ ವಾಯಿತು.

"ಕೇಶವ ಭಟ್ಟರೇ" ಎಂದು ಕೂಗಿದ ಕೂಡಲೇ ಹಿಂತಿರುಗಿ ಕೇಶವ ಭಟ್ಟರು,

"ಮಲುಹಣ ದೇವರೇ...ನಿಮಗೆ ಈ ಸ್ಥಿತಿ ಬರುತ್ತದೆಂದು ನಾನು ಕಂಡಿರಲಿಲ್ಲ. ನಿಮ್ಮ ತಂದೆಯವರಿದ್ದರೆ.... ಅದೆಷ್ಟು ಚಿಂತಿಸುತ್ತಿದ್ದರು? ಅಂಥವರು ಈಗ ಯಾರೂ ಇಲ್ಲದಂತಾಗಿದೆ. ನೀವದೆಷ್ಟು ಒಣಗಿದ್ದೀರಿ, ಸೊರಗಿದ್ದೀರಿ. ನಿಮ್ಮನ್ನು ಪತ್ತೆ ಹಚ್ಚಲೇ ಸಾಧ್ಯವಿಲ್ಲವಾಗಿದೆ ಮಲುಹಣದೇವರು."

"ನೀವೊಬ್ಬರಿದ್ದೀರಲ್ಲಾ ಭಟ್ಟರೇ ?"

"ಬಡವನಿಂದೇನಾಗುತ್ತದೆ ?"

"ಹೃದಯ ತುಂಬಿದ ಶ್ರೀಮಂತಿಕೆಯ ಪ್ರೀತಿಗಿಂತ ಒಂದು ವಸ್ತು ಬೇಕೆ ?"

"ಅದು ದೊಡ್ಡ ಮಾತು"

"ಮನೆಗೆ ಬೀಗ ಮುದ್ರೆಯಾಗಿತ್ತು. ನಿಮ್ಮ ಚಿಂತೆಯಲ್ಲೇ ಬರುತ್ತಿದ್ದೆ. ನಿಮ್ಮ ದರ್ಶನ ದೊರೆಯಿತು"

"ಅಯ್ಯೋ ಎಂಥ ಸ್ಥಿತಿ ಬಂದೊದಗಿತು ?"

"ಇನ್ನು ಅದರ ಯೋಚನೆ ಬಿಡಿ"

"ಬನ್ನಿ...ನಮ್ಮ ಮನೆಗೆ ನಾವು ಹೋಗೋಣ"

"ನನ್ನನ್ನು ಸಾಕುವುದರಿಂದ ಏನೂ ಪ್ರಯೋಜನವಿಲ್ಲ. ನಾನೀಗ ಸಮಾಜಕ್ಕೆ ಹೊರೆ ಎಂದು ಪದ್ಮಾವತಿ ಕಳುಹಿಸಿದ್ದಾಳೆ. ಅನುಭೋಗಿಸಬೇಕಾಗಿರುವುದನ್ನು ನಾನು ಅನುಭೋಗಿಸುತ್ತೇನೆ"

"ನಿಮ್ಮ ಮನೆಯ ಉಪ್ಪುಂಡಿರುವೆ. ನಾನು ನಿಮ್ಮನ್ನು ಕಾಪಾಡುತ್ತೇನೆ. ಮನುಷ್ಯನಿಗೆ ಹಣ ಮುಖ್ಯವಲ್ಲ. ಗುಣ ಮಲುಹಣ ದೇವರು"

ವಿಚಿತ್ರವಾಗಿ ನಗುತ್ತಾ ಮಲುಹಣ...

"ಹೋಗಿ...ಹೋಗಿ...ಭಟ್ಟರೇ...ನನಗೀಗ ಹಣವೂ ಇಲ್ಲ, ಗುಣವೂ ಇಲ್ಲ"ಎಂದು ಹೊರಡಲನುವಾದ. ಕೇಶವ ಭಟ್ಟರು ಕಣ್ಣೀರು

ಹಾಕಿಕೊಂಡು ಮನೆಯತ್ತ ಹೊರಟರು. ಮಲುಹಣನು ವಿರಹತಾಪದಿಂದ ಬೇಯುತ್ತಾ ಹೊರಟ.

ಬೀದಿಯಲ್ಲಿ ಈತನ ವಿಚಿತ್ರ ಸ್ಥಿತಿಯನ್ನು ಗಮನಿಸಿ ಹುಡುಗರು ಕೇಕೆ ಹಾಕಿ ನಗುತ್ತಾ ಛೇಡಿಸುತ್ತಾ "ಹುಚ್ಚ....ಹುಚ್ಚ..." ಎಂದು ಕೂಗಿದರು. ಕೆಲವು ಹುಡುಗರು "ಸುವರ್ಣಭಟ್ಟರ ಮಗ ವೇಶ್ಯೆ ಕಟ್ಕೊಂಡು ಹೀಗಾದ್ನಂತೆ"

"ಈತನಿಗೆ ಯಾರೂ ದಿಕ್ಕಿಲ್ದೇ...ಹೀಗಾದ್ನಂತೆ" "ಅಯ್ಯೋ ಎಂಥ ಐಶ್ವರ್ಯವಂತ ಹೇಗಾದ ? ಆತನ ತಂದೆ ದಾನಿ. ಆತನ ಮಗನಿಗ ಹೀಗಾಗಬೇಕೆ ?" ಎಂದು ನಾನಾ ರೀತಿಯಾಗಿ ಮಾತಾಡುತ್ತಿದ್ದುದಲ್ಲದ ಮಂಜುಗಡ್ಡೆಯನ್ನು ಎಸೆದು ಛೇಡಿಸಲಾರಂಭಿಸಿದರು. ಕರ್ಣಕಠೋರ ವಾಕ್ಯಗಳು, ಏಟು ಇವುಗಳನ್ನು ಸಹಿಸಿಕೊಂಡು ಕಣ್ಣೀರು ಗರೆಯುತ್ತಾ ನಡೆಯುತ್ತಿದ್ದ.

ಅಲ್ಲಿಯ ಒಬ್ಬ ಮುದುಕಿ ಎಲೆಗೆ ಸ್ವಲ್ಪ ಅನ್ನ ಸಾರು ಹಾಕಿ ತಂದು ಕೊಟ್ಟಳು. ಅದನ್ನು ನೋಡಿದ ಮಲುಹಣ ಹೊಟ್ಟೆ ಬೆನ್ನಿಗಂಟಿಕೊಂಡು ಬಾಯಲ್ಲಿ ನೀರೂರಿತು. ಕೈ ನೀಡುವುದು ಹೇಗೆ ಎನ್ನಿಸಿತು.

"ತೆಗೆದುಕೊಳ್ಳಪ್ಪ..ಏನೂ ಸಂಕೋಚಪಡಬೇಡ ತೆಗೋ"

"ದಾನಿಯ ಮಗ ಭಿಕ್ಷೆ ಎತ್ತುವಂತಾಯಿತೇ ?ನಮ್ಮ ತಂದೆಯ ದಾನನೇ ನನಗೆ ಮರು ದಾನವಾಗಿ ಬರುತ್ತಿದೆಯೋ ಏನೋ ? ಆದರೆ ಈ ಹಸಿವು ತಡೆಯಲಾಗದು, ಎಂದು ತೆಗೆದುಕೊಂಡು ಗಬಗಬನೆ ತಿಂದ. ಮುದುಕಿ ಸ್ವಲ್ಪ ನೀರನ್ನೂ ತಂದುಕೊಟ್ಟಳು. ಅದನ್ನು ಕುಡಿದು ಕೈ ಮುಗಿದು ಹೊರಟ.

ದಾರಿಯಲ್ಲಿ ಬರುತ್ತಿದ್ದ ಮಲುಹಣನನ್ನು ನೋಡಿದ ಸ್ನೇಹಿತರಾದ ವಿಜಯ್ ಜಯದೇವ್ ಇಬ್ಬರೂ..

"ಆಹಾ...ಮಲುಹಣ ಹೇಗಾಗಿ ಹೋದ ?" ಎಂದರು.

"ನಮ್ಮ ಮಾತನ್ನು ಕೇಳಿದ್ದಿದ್ದರೆ ಹೀಗಾಗುತ್ತಿದ್ದನೇ ?ಸಾವಿರ ಇದ್ದರೂ ಸಂಜೆಗ ಲಯ ಎಂಬಂತಾಯ್ತು ವೇಶ್ಯಾ ಸಹವಾಸದಿಂದ" ವಿಜಯ್ ಉಲಿದ.

ವಿಜಯ್ ಜಯದೇವನನ್ನುದ್ದೇಶಿಸಿ

'ಜಯದೇವ್ ನೀನೇನಾದ್ರೂ ಈ ಹುಚ್ಚನನ್ನು ಸೇರಿಸಿಕೊಂಡು ಬಿಟ್ಟೀಯೆ ? ಆಮೇಲೆ ನೀನು ಅವನ ಹಾಗೆ ಭಿಕಾರಿ ಆಗಬೇಕಾದೀತು ?"

ಈ ಮಾತು ಕೇಳಿದ ಮಲುಹಣನ ಎದೆಗೆ ಕಾದ ಕಬ್ಬಿಣದಲ್ಲಿ ಸುಟ್ಟಂತಾಯಿತು. ಕಂಗಳ ಬಳೆಗಳಲ್ಲಿ ನೀರಾಡಿತು. ಇಬ್ಬರೂ ನಿಂತು,

'ಇದೇನಯ್ಯಾ ಮಲುಹಣಾ ?" ಎಂದ ಜಯದೇವ್.

"ನಾವು ಎಷ್ಟು ಹೇಳಿದರೂ ಕೇಳಿದೆಯಾ ?" ಎಂದು ದನಿಗೂಡಿಸಿದ ವಿಜಯ್. ಅವರ ಪ್ರಶ್ನೆಗಳು ಚುಚ್ಚು ಮಾತುಗಳಿಗೆ ಕಣ್ಣೀರೊಂದೇ ಉತ್ತರ ವಾಗಿತ್ತು.

"ಏನು ಮಾಡಲಿ ?" ಎಂದು ದುಗುಡದಲ್ಲಿ.

"ಮಾಡುವುದೇನು ?ನಿನ್ನ ಕುಬೇರನಂಥ ಐಶ್ವರ್ಯವನ್ನೇ ಕರಗಿಸಿದೆ, ಅದಕ್ಕೇ ಹೇಳುವುದು, ಕುಂತು ಉಣ್ಣುವವನಿಗೆ ಕುಡಿಕೆ ಹಣ ಸಾಲುತ್ಯೇ ಅಂತ"

ವಿಜಯ್ ತನ್ನ ಮಾತನ್ನು ಬೆಳೆಸಿ,

ಅದಕ್ಕೇ ಹೇಳುವುದು ವೇಶ್ಯಾ ಸಹವಾಸ ಮಾಡಬಾರದು."

ಮಲುಹಣ ಮಾತಾಡದೆ ಅಲ್ಲಿಂದ ಹೊರಟ. ಮಿತ್ರರೀರ್ವರೂ ತಮ್ಮ ಮನೆಯ ಒಳಗಡೆ ಹೋದರು.

ಮನೆಗೆ ಬಾ ಎಂದೂ, ಹೇಳದೆ ಹೋದುದು ಮಲುಹಣನಿಗೆ ಬಹಳ ದುಃಖ ತಂದಿತು. ಈ ರೀತಿ ಸ್ನೇಹಿತರು ಪರಿವರ್ತನೆ ಹೊಂದುತ್ತಾರೆಂದು ನಂಬಿರಲಿಲ್ಲ.

"ನನ್ನಲ್ಲಿ ಐಶ್ವರ್ಯ ಇದ್ದಾಗ ಮಿತ್ರರು, ಈಗ ಯಾರೂ ಇಲ್ಲ. ಎಂಥ ಪ್ರಪಂಚ? ಅದಕ್ಕೇ ತಂದೆಯವರು ಹಣವನ್ನು ಇಟ್ಟಿದ್ದುದು" ಎಂದುಕೊಂಡ.

ಹೊಟ್ಟೆ ಹಸಿದು ಹಣ್ಣಾಗಿತ್ತು. ನಡೆಯಲೂ ಶಕ್ತಿ ಸಾಲದಾಗಿತ್ತು. ಹಾಗೆಯೇ ಪಕ್ಕದಲ್ಲಿದ್ದ ಹುಲ್ಲಿನ ತಕ್ಕೆಯ ಮೇಲೆ ಮಲಗಲು ಹೋದ. ಇದ್ದಕ್ಕಿದ್ದಂತೆಯೇ ಓಲೆಯೊಂದನ್ನು ಹಿಡಿದ ಹಾಗಾಯಿತು. ಅದನ್ನು ತೆಗೆದು ಕೊಂಡು ಈತನು ಕುಳಿತಿದ್ದ ಉದ್ಯಾನಕ್ಕೆ ಬಂದವಳು ಸ್ವರೂಪ್, ಅದೇನಿರಬಹುದೆಂದು ಕಾತುರದಿಂದ ತೆಗೆದುಕೊಂಡು ನೋಡಲನುವಾದ, ನೋಡುವ ಮೊದಲೇ ಮಲುಹಣೆಯದಿರಬಹುದೆಂದು ಊಹಿಸಿದ್ದ. ಕಣ್ಣುಗಳು ಬೇಗ ಓದಿ ಮುಗಿಸುವ ಆಸೆಯಿಂದ, ಕಣ್ಣಾಡಿಸಲಾರಂಭಿಸಿದನು.

ಪ್ರಿಯತಮಾ,

ಲೇಖನಿ ಎತ್ತಿ ಓಲೆಯ ಮೇಲೆ ಬರೆಯುವಾಗಲೂ ಕೈನಡುಗುತ್ತಿದೆ. ಎದೆಯ ಬಡಿತ ಹೆಚ್ಚಾಗುತ್ತಿದೆ. ಕಣ್ಣಲ್ಲಿ ನೀರು ಉಕ್ಕುತ್ತಿದೆ ಅಕ್ಷರಗಳನ್ನೇ ಮುಚ್ಚುವಂತೆ ತೊಟ್ಟಿಕ್ಕುತ್ತದೆ. ಆದರೂ ಸಂಕಲ್ಪ ಓಲೆ ಬರೆದು ಮುಗಿಸಬೇಕೆಂಬುದೇ,

ಮಲುಹಣಾ...ನನ್ನ ಸುಖಸಾಗರ, ಈ ವಿರಹ ವೇದನೆಯನ್ನು ಈ ಓಲೆಯಲ್ಲಿ ತುಂಬಿದ್ದೇನೆ. ನೀನಿಲ್ಲದ ಪ್ರಪಂಚ ನೀರಸವಾಗಿದೆ. ನೀನಿಲ್ಲದೆ ಒಂದೊಂದು ನಿಮಿಷವನ್ನು ಕಳೆಯುವುದೂ ಒಂದೊಂದು ಯುಗವಾಗಿ ಜೀವನವೇ ಬೇಸರವಾಗಿದೆ. ಅದೆಷ್ಟೋ ಸಾರಿ ನೀನಿರುವೆ ಎಂದು ಭ್ರಮಿಸಿ ಅಪ್ಪಿಕೊಳ್ಳುತ್ತೇನೆ. ಸವಿ ರಾತ್ರಿಗಳು ನೆನಪಿಗೆ ಬಂದು ಮತ್ತೆ ನಿನ್ನಂಗಸಂಗ ಬಯಸುತ್ತೇನೆ. ನೀನು ಮನೆಬಿಟ್ಟು ಹೋದದ್ದೇ ಆಯಿತು. ದುಃಖವೊಂದೇ ಸಮಾಧಾನ ಕೊಟ್ಟಿದೆ. ಒಂದು ದಿನವಾದರೂ ನಗುನಗುತ್ತಾ ಗೆಲುವಾಗಿ ಮಿತ್ರರಲ್ಲಿ ಮಾತಾಡಿಲ್ಲ. ಭಕ್ಷ್ಯ ಭೋಜ್ಯಗಳನ್ನು ಸೇವಿಸುತ್ತಿಲ್ಲ. ಕೊರಗಿ ಕೊರಗಿ ದಿನದನಕ್ಕೆ ಕಡ್ಡಿಯಾಗುತ್ತರುವೆ. ನಿನ್ನೊಂದು ಅಪ್ಪುಗೆಯನ್ನು ಮೈ ಬೇಡುತ್ತಿದೆ. ನಾನು ನೀನಲ್ಲದೆ ಮತ್ತಾರನ್ನೂ ವರಿಸಿಲ್ಲ, ನಾನು ಅಪವಿತ್ರಳಲ್ಲ, ನನ್ನ ಮೈಯನ್ನು ಯಾರಿಗೂ ಮಾರಿಕೊಂಡಿಲ್ಲ. ಗಿಡದಲ್ಲಿ ಬಿಟ್ಟ ಪುಷ್ಪ

ಈಶನಿಗೆ ಅರ್ಪಿತವಾಗುವಂತೆ ನನ್ನ ದೇಹ ನಿನ್ನೊಬ್ಬನಿಗೇ ಮೀಸಲು, ತಾಯಿಯ ಮಾತನ್ನು ಒತ್ತರಿಸಿ ನನ್ನನ್ನು. ಕಾಪಾಡಿ, ಎಲ್ಲೆಲ್ಲೋ ನೀನು ಇರುವಿರಿ ಎಂಬ ಭ್ರಮೆ ನನ್ನನ್ನು ದಿನವೂ ಕಾಡಿಸುತ್ತಿದೆ. ಹಗಲನ್ನು ಹೇಗೋ ಕಳೆದರೂ ರಾತ್ರಿಯನ್ನು ಕಳೆಯುವುದ ನನ್ನಿಂದ ಸಾಧ್ಯವಿಲ್ಲ. ಕಂಗಳಿಗೆ ನಿದ್ದೆ ಬಾರದು. ಮನಸ್ಸು ನಿನ್ನ ಯೋಚನೆಯಲ್ಲೇ ಇರುತ್ತದೆ.ಈ ವೇದನೆಯನ್ನು ನಿನ್ನೊಬ್ಬ ನಲ್ಲಿ ತೋಡಿಕೊಳ್ಳಲು ಸಾಧ್ಯವೆಂದು ಈ ಓಲೆಯನ್ನು ಬರೆದು ಕಳುಹಿಸಿರುವೆ. ಹಿಂದಿನ ದನ್ನೆಲ್ಲಾ ಮರೆತು ಮತ್ತೆ ನೀನು ನನ್ನವನಾಗಬೇಕು. ನಾನು ನಿನ್ನವಳಾಗ ಬಯಸುವ. ಎಷ್ಟೆ ಮಚ್ಚರವಿದ್ದರೂ ಮರೆಯದೆ ಬರುವುದು. ತಿಳಿಯದೆ ನಾನು ಏನೇ ಬರೆದಿದ್ದರೂ, ತಪ್ಪುಗಳನ್ನೆಲ್ಲ ಕ್ಷಮಿಸು ವಿರೆಂಬ ನನ್ನ ಭರವಸೆ, ಶಕ್ತಿ ಇದ್ದರೂ ಲೇಖನಿಯಿಂದ ಇನ್ನು ಹೆಚ್ಚಿಗೆ ಬರೆಯಲಾಗುತ್ತಿಲ್ಲ. ಇಲ್ಲಿಗೆ ವಿರಮಿಸುತ್ತೇನೆ.

ಸದಾ ತಮ್ಮ ಚರಣದಾಸಿ,<br>**ಮಲುಹಣಿ.**

ಓಲೆಯನ್ನು ಒಂದೆಡೆ ಇಟ್ಟು ಯೋಚಿಸತೊಡಗಿದ ಮಲುಹಣ,

"ಹೌದು...ಹೌದು...ನಿನಗೇನು ? ನನಗೂ ಹಾಗೆಯೇ ಅನ್ನಿಸುತ್ತದೆ. ನಿನ್ನನ್ನು ಬಿಟ್ಟು ಇರಲಾಗದು. ಆದರೆ ನಿನ್ನ ತಾಯಿ ಮತ್ತೆ ನನ್ನನ್ನು ಸೇರಿಸಲು ಒಪ್ಪುವಳೇ ? ಆಕೆಯದೇನು? ನೀನೇ ಓಲೆ ಬರೆದಿರುವಾಗ ಬರೆಯುತ್ತೇನೆ. ಬರುತ್ತೇನೆ.." ಕೂಡಲೇ ಕಿಸೆಯಲ್ಲಿನ ತಾಳೆಯೋಲೆಯ ಕಟ್ಟನ್ನು ಬಿಚ್ಚಿ ಒಂದನ್ನು ತೆಗೆದು ಅದ್ದಿ ಬರೆಯಲಾರಂಭಿಸಿದ.

**ಎನ್ನ ಅರಗಿಣೀ,**

ಮನಸ್ಸನ್ನು ಅದೆಷ್ಟೋ ಬಿಗಿ ಹಿಡಿದೆ, ಸ್ಮರಣೆ ತಂದುಕೊಂಡೆ, ಆದರೂ ನೀನು ನನ್ನನ್ನು ಅಯಸ್ಕಾಂತದಂತೆ ಆಕರ್ಷಿಸುತ್ತೀಯೆ. ಹಾಗಿರು

ವಾಗ ನಾನು ನಿನ್ನ ಹತ್ತಿರ ಬರದೆ ಹೇಗೆ? ನನ್ನ ಸರ್ವಸ್ವವನ್ನೂ ಧಾರೆಯೆರೆದು ಕೊಟ್ಟಮೇಲೆ ನಾನೇ ಬೇಡವಾದೆನೇ ? ನಮ್ಮಿಬ್ಬರ ಸಂಕಲ್ಪ ಮುರಿದಂ ತಾಗುವುದಿಲ್ಲವೇ ? ಅದಕ್ಕೋಸ್ಕರ ಈ ಓಲೆಯಲ್ಲಿ ನನ್ನ ವಿರಹಾಗ್ನಿಯನ್ನು ತುಂಬಿರುವೆ. ಇದನ್ನು ಆರಿಸಲು ನಿಮ್ಮೊಬ್ಬಳಿಂದಲೇ ಸಾಧ್ಯ. ನೀನಿಲ್ಲದ ಪ್ರಪಂಚ ನನಗೆ ಶೂನ್ಯ. ನೀನು ಪತಿವ್ರತೆ, ಪರ ಪುರುಷರನ್ನು ಕಣ್ಣೆತ್ತಿ ನೋಡುವವಳಲ್ಲ ಎಂಬುದು ಗೊತ್ತು. ಆದರೂ ತಾಯಿಯ ಬಲವಂತಕ್ಕೆ... ಇಲ್ಲ ಖಂಡಿತ ಸಾಧ್ಯವಿಲ್ಲ, ಚಕೋರ ಪಕ್ಷಿಗಳು ಬೆಳದಿಂಗಳನ್ನು ಕಾದಂತೆ ನೀನು ನನ್ನನ್ನೇ ಕಾದಿರುವೆ ಎಂಬುದು ನನಗೆ ಗೊತ್ತು. ಹೀಗಿರುವಾಗ ನಾನು ನಿನಗೆ ನನ್ನ ಮನದಲ್ಲಾಗುವ ತುಮುಲವನ್ನು ಈ ಓಲೆಯಲ್ಲಾದರೂ ತಿಳಿಸ ಬೇಡವೇ? ನಿನ್ನನ್ನು ಮತ್ತೆ ಮತ್ತೆ ನೋಡಬೇಕೆನಿಸುತ್ತದೆ. ಈ ಪರದೇಶಿಗೆ ಈ ಪ್ರಪಂಚದಲ್ಲಿ ನಿನ್ನನ್ನು ನೋಡಬೇಕೆಂಬ ಬಯಕೆಯೊಂದನ್ನು ಬಿಟ್ಟರೆ ಮತ್ತಾವುದೂ ಇಲ್ಲ. ಇದು ನಮ್ಮಿಬ್ಬರ ಜನ್ಮ ಜನ್ಮದಿಂದ ಬಂದ ಮೈತ್ರಿಯೇ ಇರಬೇಕು ಎಂದು ಭಾಸವಾಗುತ್ತದೆ. ಆದುದರಿಂದಲೇ ಈ ಓಲೆಯನ್ನು ನಿನಗೆ ಬರೆದೆ. ನನ್ನನ್ನು ಬೇಗನೆ ಕರೆಸಿಕೋ, ನಿನ್ನ ಹೃದಯ ತುಂಬಿಸಿಕೋ, ನನ್ನ ಹೃದಯೇಶ್ವರಿ, ಉತ್ತರಕ್ಕೆ ಕಾಯುತ್ತಿರುವೆ. ಹೃದ ಯವನ್ನು ಕಲ್ಲು ಮಾಡದೆ ಮಾರೋಲೆಯನ್ನು ಬರೆಯುತ್ತಾಳೆಂಬ ಅಭಿಲಾಷೆಯನ್ನು ತುಂಬಿಕೊಂಡಿದ್ದೇನೆ. ಇದಕ್ಕಿಂತ ಹೆಚ್ಚಿಗೆ ಬರೆಯಲು ನಾನು ಅಶಕ್ತ.

ನಿನ್ನ ಪ್ರಿಯತಮ.
**ಮಲುಹಣ.**

ಇಷ್ಟನ್ನು ಬರೆದು ಮುಗಿಸುವ ಹೊತ್ತಿಗೆ ಸ್ವರೂಪ್ ಹೂವನ್ನು ತೆಗೆದುಕೊಂಡು ಹೋಗುತ್ತಿರಲು ಮಲುಹಣ ಆಕೆಯನ್ನು ದಿಟ್ಟಿಸಿ..

"ಸ್ವರೂಪ್...." ಎಂದ ಮೆಲ್ಲನೆ.

ಮುಖ ಸರಿಸಿ ನಿಂತ ಆಕೆ..

"ಏನು ?" ಎಂದಳು ನಾಚಿ ಮೆಲ್ದನಿಯಲ್ಲಿ.

"ಹೋಗುತ್ತಿದ್ದೀರಿ..?"

"ನಿಮ್ಮನ್ನು ಈ ಸ್ಥಿತಿಯಲ್ಲಿ ಹೇಗೆ ಮಾತನಾಡಿಸುವುದು ?" ಎಂದಳು ದುಗುಡದ ದನಿಯಲ್ಲಿ.

"ನಾನು ಅಷ್ಟೊಂದು...ಹೀನನಾದೆನೆ ?"

"ಓಲೆಯನ್ನು ಬರೆದಿರುವೆ ಅದನ್ನು ನನ್ನ ಮಲುಹಣೆಗೆ ತಲುಪಿಸ ಬೇಕು"

"ನಿಮಗೆ ಇನ್ನೂ ಅದರ ಚಪಲ ಬಿಟ್ಟಿಲ್ಲವೇ ?"

"ಬಿಟ್ಟೆನೆಂದರೂ ಆ ಮಾಯೆ ಬಿಡದು"

"ಅಯ್ಯೋ ಕರ್ಮ. ಅವರೂ ಅಷ್ಟೇ....ಸದಾ ನಿಮ್ಮ ಯೋಚನೆ ಯಲ್ಲಿ ಕಾಲ ನೂಕುತ್ತಿದ್ದಾರೆ. ಹ್ಞೂಂ...ಕೊಡಿ ಕೊಡುತ್ತೇನೆ"

ಮಲುಹಣನು ಓಲೆ ಕೊಟ್ಟನು. ಸ್ವರೂಪ್ ಹೊರಟಳು ನೇರವಾಗಿ ಮಲುಹಣೆಯ ಮನೆಗೆ.

ಕೂಡಲೇ "ಹ್ಞಾಂ...ಸದಾ ನನ್ನ ಚಿಂತೆಯೇ" ಎಂದು ಆನಂದಭರಿತ ನಾದನು.

ಸ್ವರೂಪ್ ನೇರವಾಗಿ, ಆನಂದದ ಭರದಲ್ಲಿ ಮಲುಹಣೆಯ ಗೃಹ ವನ್ನು ಪ್ರವೇಶಿಸಿದಳು. ಕೈಯನ್ನು ಹಿಂದಕ್ಕೆ ಕಟ್ಟಿಕೊಂಡು ದುಃಖದಲ್ಲಿದ್ದ ಮಲುಹಣೆಯ ಹತ್ತಿರ ಬಂದು ಏದುವ ದನಿಯಲ್ಲಿ..

"ಮಲುಹಣೇ..ಒಂದು ಬಿಸಿ ಬಿಸಿ ಸುದ್ದಿ' ಎಂದಳು.

ಏನೂ ತೋಚದವಳಂತೆ ಮಲುಹಣೆ ಅವಳನ್ನೇ ನೋಡಿದಳು. ಅರ್ಥವಾಗದೆ ದಿಢೀರನೆ ಎದ್ದು ಕುಳಿತು.

"ಏನು ?" ಎಂದಳು.

ಕೈ ಕಟ್ಟಿದ್ದುದನ್ನು ನೋಡಿ ಕೈಯಲ್ಲಿ ಏನೋ ತಂದಿರಬಹದೆಂದು ಊಹಿಸಿ ಮೇಲೆದ್ದು ಬಂದು ಹಿಂದೆ ನೋಡಲು ಸ್ವರೂಪ್ ಸುತ್ತಾಡಿ..

"ನಿನ್ನ ಓಲೆಗೆ ಪ್ರಿಯತಮನ ಮಾರೋಲೆ" ಎಂದಳು.

"ಎಲ್ಲಿ, ಏನು ಬರೆದಿದ್ದಾರೆ ನೋಡೋಣ"

"ಇನ್ನೂ ನಿನಗೆ ಚಪಲ ಬಿಡಲಿಲ್ಲವೇ ?"

"ಸ್ವರೂಪ್ ಹಾಗೆಂದು ನನಗೆ ದುಃಖ ತುಂಬಬೇಡ" ಎನ್ನುತ್ತಿದ್ದಂತೆ ದುಃಖ ಉಮ್ಮಳಿಸಿತು. ಮಲುಹಣನ ಪತ್ರ ಓದುವ ಕಾತುರತೆ ಹೆಚ್ಚಿತು. ಅದನ್ನು ನೋಡಿದ ಸ್ವರೂಪ್ ಕನಿಕರದಿಂದ ಕೈಗಿತ್ತಳು. ಕೂಡಲೇ ತೆಗೆದುಕೊಂಡು ಕಣ್ಣಾಡಿಸಿದಳು. ಕಂಗಳಲ್ಲಿ ನೀರು ತುಂಬಿಕೊಂಡು ಓದಲಾಗದೆ ರೆಪ್ಪೆ ಮುಚ್ಚಿ ದುಗುಡದ ಕಣ್ಣೀರನ್ನು ಹೊರಗೆಡಹಿ ಮತ್ತೆ ಓದಿದಳು. ಮನದಲ್ಲೇ ಮರುಗಿ, ಕೊರಗಿ, ಸೊರಗಿ ಮತ್ತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

"ಸ್ವರೂಪ್ ಇಂಥ ಪರಿಸ್ಥಿತಿ ಬರುತ್ತದೆಂದು ಕನಸು ಮನಸಿನಲ್ಲೂ ನಾನು ನೆನೆಸಿರಲಿಲ್ಲ"

"ಆದದ್ದು ಆಗಿ ಹೋಯಿತು. ಅದಕ್ಕೇಕೆ ಇಷ್ಟು ಅಳುತ್ತಿರುವೆ. ಜೀವನದಲ್ಲಿ ಸಂತೋಷ, ದುಃಖ ಎಂದೂ ಸಹಜವಾಗಿಯೇ ಬರುವವು ಅದಕ್ಕೆ ಯಾರೂ ಏನೂ ಮಾಡಲಿಕ್ಕಾಗುವುದಿಲ್ಲ. ಸೈರಣೆ ತಂದುಕೊಂಡು ಹೋಗಲೇಬೇಕು"

"ಸ್ವರೂಪ್ ನೀನೇನೋ ಹೇಳುತ್ತೀಯೆ, ಆದರೆ ಒಂದೊಂದು ನಿಮಿಷವೂ ಅನುಭವಿಸುವ ನನಗೆ ಆಗುತ್ತಿದೆ ದುಃಖ. ಅತ್ತ ಅವರೆಷ್ಟು ವೇದನೆ ಪಡುತ್ತಾರೆಯೋ. ಆತ ಬೀದಿಯ ಭಿಕಾರಿಯಾಗಿ ನಿನ್ನನಾಮಸ್ಮರಣೆಯಲ್ಲೇ ಇದ್ದಾನೆ"

"ಅದು ನನಗೆ ಗೊತ್ತಿದೆ ಸ್ವರೂಪ್. ಅದಕ್ಕೇನು ಮಾಡಬೇಕು. ನಾನು ಹೊರಟು ಹೋಗಲೇ ಎನ್ನಿಸುವಂತಾಗಿದೆ."

"ಅದು ಸರಿಯಲ್ಲ. ಅದಕ್ಕೆ ಪದ್ಮಾವತಿಯರು ನಡೆಯಗೊಡುವುದಿಲ್ಲ. ಅಷ್ಟಕ್ಕೆ ಸಮಯ ಬರುತ್ತದೆ. ಅಲ್ಲಿಯವರೆಗೆ ಕಾಯಿರಿ."

"ಅದಾವಾಗ ಹೊತ್ತು ಬರುವುದೋ ?"

ಎಂದು ಹಾಗೆಯೇ ರಾತ್ರಿ ಹಾಸಿಗೆಯ ಮೇಲುರುಳಿದಳು, ಎದೆಯ ಮೇಲೆ ಓಲೆಯನ್ನು ಒತ್ತಿಟ್ಟುಕೊಂಡು. ಸ್ವರೂಪ್ ಅಲ್ಲಿಂದ ಅಡಿಯಿಟ್ಟಳು.

ಪತ್ರಕ್ಕೆ ಏನು ಉತ್ತರ ಬರೆಯಲಿ? ಹೇಗೆ ಬರೆಯಲಿ? ಎಂದು ಯೋಚಿಸುತ್ತಾ ಎದ್ದು ದೀಪದ ಬತ್ತಿಯನ್ನು ಮೇಲತ್ತಿ ತಾಳೆಯೋಲೆಯೊಂದನ್ನು ತೆಗೆದುಕೊಂಡು ದುಂಡು ಮೇಜಿನ ಮೇಲಿಟ್ಟು ಬರೆಯಲಾರಂಭಿಸಿದಳು.

ರಸಿಕ ಚಕ್ರೇಶ್ವರಾ,

ನಾವಿಬ್ಬರೂ ಪ್ರೇಮ ಪತ್ರಗಳನ್ನು ಬರೆದು ಓದಿ ಸಂತೋಷ ಪಡದೆ ಹೋದರೂ ವಿರಹ ಪತ್ರಗಳನ್ನು ಬರೆದು ಸಂತೋಷ ಎನ್ನಲಾಗದು, ಸಮಾಧಾನ ಹೊಂದಬೇಕಾಗಿದೆ.

ತಮ್ಮ ಕರುಣಾಜನಕ ಓಲೆಯನ್ನು ಓದಿ ನನಗೆ ತಡೆಯಲಾರದ ದುಃಖ ಉಂಟಾಗಿದೆ. ವಿರಹವೇದನೆ ನಿಮ್ಮ ಹತ್ತರಷ್ಟು ಹೆಚ್ಚಿದೆ. ನನ್ನ ಜೀವನವೇ ಶೂನ್ಯವಾಗಿದೆ. ನನ್ನ ಮನಸ್ಸು ತೂಗುಯ್ಯಾಲೆಯಾಡುತ್ತಿದೆ. ಒಂದೆಡೆ ತಾಯಿಯ ಬಂಧನ, ಮತ್ತೊಂದೆಡೆ ನಿಮ್ಮಿಂದ ಅಗಲಿಕೆ ಸೇರಿ ದಾಹವನ್ನೇ ಬೆಂಡಾಗಿ ಮಾಡಿದೆ. ಇದಕ್ಕೆ ಪರಿಹಾರ ಏನೆಂಬುದನ್ನು ಅಷ್ಟು ದಿನಗಳಿಂದಲೂ ಹುಡುಕಿ ನಿರಾಶಳಾಗಿದ್ದೇನೆ, ಕೃಶಳಾಗಿದ್ದೇನೆ. ನಿಮ್ಮ ಸಂಕಲ್ಪ ನನಗೆ ಗೊತ್ತು. ಆದರೆ ನಾನೇ ನನ್ನ ಸಂಕಲ್ಪವನ್ನು ಕಳೆದುಕೊಂಡ ಪಾಪಿಯಾಗಿದ್ದೇನೆ. ಇದಕ್ಕೆ ಒಂದೇ ಕೊನೆಯ ಧೃಡ ನಿರ್ಧಾರಕ್ಕೆ ಬಂದು ತಮಗೆ ಈ ಓಲೆಯನ್ನು ಬರೆಯಬೇಕೆಂದು ಮನಸ್ಸಾಗಿದೆ. ನಾನೂ ಸಹ ನನ್ನ ಸಂಕಲ್ಪವನ್ನು ಮಾತ್ರ ಮುರಿಯುವುದಿಲ್ಲ. ನಿಮ್ಮನ್ನು ಮತ್ತೆ ಸೇರಿಕೊಳ್ಳದಿದ್ದರೂ,

ನಾನು ಮಾತ್ರ ಮತ್ತೊಬ್ಬ ಪುರುಷನಲ್ಲಿ ಅನುರಾಗ ಬೆಳೆಸುವುದಾಗಲೀ, ಸೂಳೆ ತನಕ್ಕಾಗಲೀ ಎಡೆ ಕೊಡುವುದಿಲ್ಲ. ಇದಕ್ಕೊಂದು ದಾರಿ. ನಿಮಗೆ ನನ್ನನ್ನು ಮರೆತು ವಿಜಯೇಶ್ವರನ ದಾಸನಾಗುವುದು. ಇಷ್ಟೊಂದು ಕಠಿಣ ಳಾದಳೆಂದರೂ ಸರಿ, ಇದು ನನ್ನ ಕೊನೆಯ ನಿರ್ಧಾರ. ಕ್ಷಮಿಸಿ ಮುಂದಿನ ಜನ್ಮಕ್ಕಾದರೂ ನಾವಿಬ್ಬರೂ ಮದುವೆಯಾಗಿ ದಂಪತಿಗಳಂತೆ ಸುಖವಾಗಿ ರೋಣ. ಆದರೆ ಈ ಜನ್ಮಕ್ಕೆ ಹಿಂದಿನ ದಿನಗಳೇ ಕೊನೆಯೆಂದು ಭಾವಿಸಿ ಮುಂದಿನ ದಿನಗಳನ್ನು ದೇವರ ಪೂಜೆ, ತಪದಲ್ಲಿ ಕಳೆದು ಮುಪ್ಪಾಗೋಣ. ನನ್ನ ತಪ್ಪುಗಳೆಷ್ಟಿದ್ದರೂ ಕ್ಷಮಿಸುತ್ತೀರೆಂದು ಭಾವಿಸಿರುವೆ. ಆದರೆ ಈ ರೀತಿಯ ವೇದನೆ, ವಿರಹ, ಯಾವ ಪ್ರಣಯಿಗಳಿಗೂ ಬೇಡಿ. ನನ್ನ ಲೇಖನಿಗೆ ವಿರಾಮ ಕೊಡುತ್ತೇನೆ.

ಜನ್ಮಜನ್ಮಕ್ಕೂ ನಿಮ್ಮವಳು.
**ಮಲುಹಣೆ.**

ಬರೆದು ಮುಗಿಸುತ್ತಿದ್ದಂತೆಯೇ ಪದ್ಮಾವತಿ "ಮಲುಹಣೇ.. ಮಲುಹಣೇ..." ಎಂದು ಕೂಗುತ್ತಾ ಮಗಳಲ್ಲಿಗೆ ಬಂದಳು. ಓಲೆಯನ್ನು ಒಂದೆಡೆ ಇಟ್ಟು ಕಂಗಳಲ್ಲಿ ಹರಿಯುತ್ತಿದ್ದ ನೀರನ್ನು ಒರೆಸಿಕೊಂಡು

"ಏನವ್ವಾ ?" ಎಂದಳು.

"ಏಕವ್ವಾ? ಕಣ್ಣೀರು ಹಾಕಿಕೊಂಡು ಸುಮ್ಮನೇ ಮೂರೂ ಹೊತ್ತಾ ಆತನನ್ನು ಯೋಚಿಸುತ್ತಾ ಕುಳಿತಿದ್ದೀಯೆ ?"

"ಹೌದವ್ವಾ, ಎಷ್ಟೆಷ್ಟೋ ಮರೆಸಿದರೂ ಆಗಲಿಲ್ಲ"

"ಅದಕ್ಕೇನು ಮಾಡ್ತಾ ಇದ್ದೀ ?"

"ಓಲೆ ಬರೀತಾ ಇದ್ದೆ"

"ಏನಂತ ?"

"ನನ್ನನ್ನು ಮರೆತುಬಿಡು ಅಂತ"

"ಒಳ್ಳೇ ಕೆಲಸ ಮಾಡಿದೆ. ಎಷ್ಟೇ ಆಗಲಿ ನೀನು ನನ್ನ ಪ್ರೀತಿಯ ಮಗಳಲ್ವೇ?" ನಾನೇಳ್ವಾಗೆ ಕೇಳ್ತಾಳೆ ಅಂತ ನನಗೆ ಗೊತ್ತಿತ್ತು"

"ಆದ್ರೆ ನೀನು ಹೇಳುವ ಮಾತನ್ನು ಕೇಳೋಲ್ಲ"

"ಅದೇ ನೋಡವ್ವಾ ಆಗೋಲ್ಲ ಅನ್ನೋದು."

"ನನ್ನ ಛಲವನ್ನು ನಿನ್ನಿಂದ ಮುರಿಯಲಿಕ್ಕಾಗೋಲ್ಲ ಅನ್ನುವುದು ಮಾತ್ರ ಶತಸಿದ್ಧ"

"ನಿನ್ದ್ದೆಲ್ಲಾ ಅದೇ ಕಣೇ...ಆಡಿದ್ದೇ ಆಡ 'ಅಂತ

ಮಾತನಾಡುತ್ತಿರಲು ಅಲ್ಲಿಗೆ ಸರೋಜ್ ಬಂದಳು.

"ಸ್ವರೂಪೇ ಈ ಓಲೆಯನ್ನು ಮಲುಹಣನಿಗೆ ತಲುಪಿಸಿಬಿಡು. ನನ್ನ ಕೊನೆಯ ನಿರ್ಧಾರದ ಪತ್ರವೆಂದು ಹೇಳಿ ನನ್ನನ್ನು ಮರೆತು ಬಿಡುವಂತೆ ಹೇಳಿ ಬಂದುಬಿಡು."

ಎಂದು ಕೈಗಿತ್ತಳು. ಆಕೆ ತೆಗೆದುಕೊಂಡು ಮತ್ತೊಂದೆಡೆ ಇಟ್ಟು ಅಲ್ಲಿಂದ ಹೊರಟಳು. ಪದ್ಮಾವತಿ ಮಗಳನ್ನು ನೋಡಿ,

"ಇದೇಕೆ ಸುಮ್ಮನೆ ಕುಳಿತೆ. ಹೋಗು ಊಟ ಮಾಡು ಹೋಗು"

"ನಾನು ಊಟ ಮಾಡಿದ್ದಕ್ಕಿಂತ ಹೆಚ್ಚು ಹೋಗವ್ವಾ. ನಾನೂ ಊಟ ಮಾಡ್ತಾ ಇರೋದು ನಿನಗೆ ಗೊತ್ತೇ ಇದೆಯಲ್ಲಾ. ರಾತ್ರಿಯ ಹೊತ್ತಿನ ಊಟ ಬಿಟ್ಟು ಮೂರು ಮಾಸಗಳೇ ಆದುವು.ಇನ್ನು ಈಗ ಸೇರುವುದೇ ?"

"ನಿನ್ನನ್ನು ಮಾಡಬೇಡ ಅಂತ ಹೇಳಿದ್ದನೇ ನಾನು. ಎಷ್ಟು ಹೇಳಿ ದರೂ ಪ್ರಚಂಡತನ ಮಾಡಿದರೆ ಯಾರ ತಪ್ಪು ?"

"ನಿನ್ನದೇ...ನೀನೇ ನನ್ನ ಅನ್ನ ಕಿತ್ತೆ, ನನ್ನ ಪ್ರಾಣೇಶ್ವರನನ್ನು ನನ್ನಿಂದ ಅಗಲಿಸಿದೆ. ಅದಕ್ಕಿಂತ ಇನ್ನೇನಾಗಬೇಕು ?"

ಎನ್ನುತ್ತಿದ್ದಂತೆ ಕಂಗಳಲ್ಲಿ ನೀರು ಬಟ್ಟಲಾಡಿತು. ಪದ್ಮಾವತಿ ಏನೂ ಮಾತಾಡದೆ ಚಲಿಸದೆ ಕುಳಿತಳು. ಇನ್ನು ಹೆಚ್ಚಿಗೆ ಮಾತಾಡುವುದರಿಂದ ಏನೂ

ಪ್ರಯೋಜನವಿಲ್ಲವೆಂದು ತಿಳಿದುಕೊಂಡು ಮಲುಹಣೆಯು ಮೌನಗಾರಿ ಆದಳು.

ಮತ್ತೆ ಪದ್ಮಾವತಿ ಕೆಣಕಿ,

"ಹೋಗು...ಊಟ ಮಾಡು...ಹೊಟ್ಟೆ ಹಸಿವಾಗೋಲ್ವೇ ?"

'ನನಗೆ ಹಸಿವೇ ಇಲ್ಲ"

"ಮತ್ತೆ ಕಾಮದ ಹಸಿವಿರಬೇಕು"

"ಅದೂ ಈಗ ಆರಿಹೋಯಿತು"

"ಆದಕ್ಕೇ ಯಾರನ್ನೂ ಬೇಡ ಎನ್ನುವುದು"

ಪದ್ಮಾವತಿ ಮಗಳನ್ನು ಹೆಚ್ಚಿಗೆ ಕೆಣಕಲು ಸಿದ್ಧಳಾಗಗದೆ ತಲೆಯನ್ನು ನೇವರಿಸುತ್ತಾ

"ಹೀಗೆ ಹಠ ಮಾಡಿದ್ರೆ ಹ್ಯಾಗವ್ವಾ ? ಮಲಹಣೇ..ಅವರು ಇನ್ನೆಷ್ಟು ದಿನ ಕಾದಿರುವುದು ?"

"...."

"ಹೀಗೆ ಮಾತಿಲ್ಲದೆ ಕೂತರೆ ನನ್ನ ಗತಿ? ನನ್ನನ್ನು ಅವರು ಕೇಳುವುದು ಅವರಿಗೆ ನಾನೇನು ಉತ್ತರ ಕೊಡಲಿ ?"

"ಅವ್ವಾ ನನ್ನನ್ನು ಮಾತಾಡಿ ಕೊಲ್ಲುವುದಕ್ಕಿಂತ ಕತ್ತಿಯಿಂದ ಇರಿದು ಬಿಡು ಇಲ್ದೇ ಹೋದ್ರೆ ನದಿಗಾದ್ರೂ ತಳ್ಳಿಬಿಡು. ಆಗಲಾದ್ರೂ ನಿನಗೆ ಸಮಾಧಾನವಾಗಬಹುದು"

"ಆನೆ ತನ್ನ ತಲೆ ಮೇಲೆ ತಾನೇ ಮಣ್ಣುಹಾಕಿಕೊಳ್ಳುವಂತೆ....ನಿನ್ಗೆ ಎಷ್ಟು ಗಿಣಿಯಾಗಿ ಹೇಳಿದ್ರೆ ಏನು ? ಬಿಡು. ಅನುಭೋಗಿಸು ಹೋಗು. ಹೋಗ್ಲೀ ಹೀಗ ಅವನ ಧ್ಯಾನ ಮಾಡಿಕೊಂಡು ಕೂತ್ರೆ ಬರ್ತ್ತಾನ್ಯೇ ಆ ಮುದ್ಧಾ ಬಡವಾ"

"ಅವ್ವಾ ಹಾಗೆಲ್ಲಾ ಅಂದು ನನಗೆ ದುಃಖ ತರಬೇಡ"

"ಅಷ್ಟು ದಿನಗಳಿಂದ ಉಳಿದಿರುವ ರಾಜಪುತ್ರರಿಗೆ ಏನು ಹೇಳಲಿ. ನಾನು ಹೇಳು"

"ಊರಿಗೆ ಹೋಗುವಂತೆ ಹೇಳು '

"ಅದು ನ್ಯಾಯವೇ ?"

"ಹೌದು

"ಚೆನ್ನಾಗಿ ಯೋಚನೆ ಮಾಡು"

"ಯೋಚನೆ ಮಾಡಲಿಕ್ಕೆ ಮಲುಹಣ ವಿರಹ ತಂದೊಡ್ಡಿದೆಯಲ್ಲಾ"

"ಅವನನ್ನೇಕೆ...ಹೊಸ ಹರೆಯದ ಕುಬೇರರ ಯೋಚನೆ ಮಾಡು"

"ನಾನು ಕನಸು ಮನಸಿನಲ್ಲೂ ಆ ಯೋಚನೆ ಮಾಡಲಿಕ್ಕೆ ಹೋಗುವುದಿಲ್ಲ"

"ಇನ್ನೂ ಎಂಟು ದಿನಗಳನ್ನು ಕೊಡುತ್ತೇನೆ. ಯೋಚಿಸಿ ನೋಡು, ಇಂದಿನ ಹುರುಪಿಗೆ ಬೇಡ ಎಂಬ ಅಹಂಭಾವ ಬೇಡ. ಇಂದು ನಮಗೆ ಬೇಕಾಗಿರುವುದು ಹಣ. ನಾನು ವಯಸ್ಸು ಮೀರಿದ ಮುದುಕಿ. ನನ್ನಿಂದ ನಿನ್ನ ಭವಿಷ್ಯಕ್ಕೆ ಬೇಕಾದ ಹಣ ಮಾಡಲು ಆಗುತ್ತಿಲ್ಲ. ಅದಕ್ಕೇ ನೀನೇ ಬೇಕು"

"ಖಂಡಿತ ಆಗೋಲ್ಲ.."

"ಹಾಗಾದರೆ ಅವರನ್ನು ಕಳುಹಿಸಿಬಿಡಲೇ ?"

"ಧಾರಾಳವಾಗಿ"

"ಹಾಳಾಗಿಹೋಗು, ನಿನ್ನ ಹಣೆಯಲ್ಲಿ ಏನು ಬರೆದಿದ್ಯೋ ಅನುಭೋಗಿಸು. ಆತನ ಯೋಚನೆಯಲ್ಲೇ ನೀನು ತೇದು...ತೆವಕುಡಿದೋಗು" ಎಂದು ಮುಸಡಿ ತಿರುಗಿಸಿ ಹೊರಟಳು ಬಿರ್ಘುನಡಿಗೆಯಲ್ಲಿ.

ಮಲುಹಣೆಗೆ ತಡೆಯಲಾರದ ದುಃಖ. ಭಾರದ ಮೋಡ ಕರಗಿ ನೀರಾಗುವಂತೆ ಕಣ್ಣೀರು ಸುರಿಯಿತು. ಮಂಚದ ಮೇಲೆ ಓಡಿ ಬಂದು ದೊಪ್ಪನೆ ಬಿದ್ದಳು. ಅತ್ತಳು. ಬಿಕ್ಕಿ ಬಿಕ್ಕಿ ಅತ್ತಳು. ಮಲಹಣಾ... ಮಲುಹಣಾ..." ಎಂದು ಕೂಗಿತು ಆಕೆಯ ಮನಸ್ಸು.

"ಮಲುಹಣನನ್ನು ಬಿಟ್ಟು ಹೇಗಿರಲಿ? ಹೇಗೆ ತಿನ್ನಲಿ? ಉಣ್ಣಲಿ?ಹೇಗೆ ಗೆಲುವಿನಿಂದ ತಿರುಗಲಿ? ನಲಿದು ನರ್ತಿಸಲಿ? ಆತನ ರೂಪ, ಯೌವನ,

ಐಶ್ವರ್ಯ, ಪ್ರೀತಿ, ಆದರ ಸತ್ಕಾರಗಳನ್ನು ಹೇಗೆ ಮರೆಯಲಿ? ಅವರಿದ್ದ ಒಂದೊಂದು ನಿಮಿಷವೂ ಸ್ವರ್ಗ ದಂತಿತ್ತು. ಒಂದೊಂದು ದಿನ ಒಂದೊಂದು ನಿಮಿಷದಂತೆ ಕಳೆಯುತ್ತಿತ್ತು. ನನಗಾಗಿ ಸರ್ವಸ್ವವನ್ನು ಅರ್ಪಿಸಿ ಆತನಿಗೆ ನಾನು ಸರ್ವಸ್ವವನ್ನೂ ಅರ್ಪಿಸಲು ಅನರ್ಹಳಾದೆನಲ್ಲಾ. ಈಗ ಏನು ಮಾಡಲಿ? ಹೇಗೆ ಆತನ ಕೂಡಲಿ? ಬಾಳಲಿ? ಬರೀ ಕನಸಿನಲ್ಲೇ ಆತನನ್ನು ಕಾಣುವ ಹಾಗಾಯಿತೇ? ನಾನು ಇಲ್ಲಿ ಚಿಂತಾಕ್ರಾಂತಳಾಗಿ ಕಾಲ ಕಳೆಯುವ ಹಾಗಾಯಿತು. ಅತ್ತ ಮಲಹಣನು ವಿರಹದಿಂದ ಬೀದಿಯ ಭಿಕಾರಿಯಂತೆ ತಿರುಗಾಡು ವಂತಾಯಿತು. ಅವರ ತಂದೆಯ ಸಂಕಲ್ಪವೂ ಮುರಿಯಿತು. ಇತ್ತ ನಮ್ಮ ತಾಯಿಯ ಸಂಕಲ್ಪವೂ ಮುರಿಯಿತು. ನಮ್ಮಿಬ್ಬರನ್ನು ಬೇರ್ಪಡಿ ಸಿದುದರಿಂದ ತಾಯಿಗೆ ಬಂದ ಸುಖವಾದರೂ ಏನು? ನಮ್ಮಲ್ಲಿರುವ ಹಣ, ಮಲುಹಣನ ಸಕಲೈಶ್ವರ್ಯ, ಇನ್ನು ಎರಡು ತಲೆಮಾರು ತಿಂದರೂ ಮುಗಿ ಯದಂತಿರುವಾಗ ಮತ್ತೆ ಏಕೆ ಆಸೆ ತಾಯಿಗೆ? ಈ ಮಧ್ಯೆ ಸಿಕ್ಕಿಕೊಂಡು ನಾನು ಬದುಕುವುದಾದರೂ ಹೇಗೆ? ಈಗಲೇ ಇಷ್ಟೊಂದು ಹಿಂಸೆ ಕೊಟ್ಟ ತಾಯಿ ಬಂಧಿಸಿ ಇಡುವಳೇ ಹೊರತು ಬಿಡುವವಳಲ್ಲ. ಹೀಗಿರುವಾಗ ನಾನು ಹೇಗೆ ಆತನೊಡನೆ ಬಾಳ್ವೆ ನಡೆಸಲಿ? ಈ ವಿರಹ ತಾಪಕ್ಕೆ ತಂಪು ನೀಡುವವನು ಮಲುಹಣನೊಬ್ಬನೇ ಹೊರತು ಪ್ರಪಂಚದಲ್ಲಿ ನನಗೆ ಇನ್ನಾರೂ ಇಲ್ಲ. ಮಲುಗುತ್ತೇನೆ ಎಂದರೆ ನಿದ್ದೆ ಬರುವುದಿಲ್ಲ. ತಿರುಗಾಡುತ್ತೇನೆ ಎಂದರೆ ಹುಮ್ಮಸ್ಸಿಲ್ಲ. ಸ್ನೇಹಿತರೊಡನೆ ಸರಸವಾಗಿರಲು ಮನಸ್ಸಿಲ್ಲ. ಊಟ, ತಿಂಡಿ ಯಲ್ಲಿ ರುಚಿಯಿಲ್ಲ. ಶೃಂಗಾರ ಬೇಕಿಲ್ಲ. ಪ್ರಪಂಚದಲ್ಲ ಏನೂ ಬೇಕಿಲ್ಲ. ಹೀಗಿರುವಾಗ ನಾನು ಭೂಮಿಯ ಮೇಲೆ ಹೇಗೆ ಜೀವಿಸಲಿ?ನಾನು ಕಳುಹಿಸಿದ ಓಲೆಯನ್ನು ಓದಿ ಏನಂದುಕೊಂಡಾನೋ ಅದನ್ನು ತೆಗೆದು ಸುಟ್ಟುಬಿಡುವುದೇ ಉತ್ತಮ ಎಂದು ಹಿಂದೆ ಬರೆದ ಪತ್ರವನ್ನು ತೆಗೆದುಕೊಂಡು ಉರಿಸಿಬಿಟ್ಟಳು.

" ಈ ವಿರಹ ಪತ್ರವನ್ನೇನೋ ಹೇಗೆ ಉರಿಸಿ ಭಸ್ಮ ಮಾಡಿದನೋ ಹಾಗೆ ನಮ್ಮಿಬ್ಬರ ವಿರಹವೂ ಸುಟ್ಟು ಭಸ್ಮವಾಗಿ ಮತ್ತೆ ಸರಸ ಕಾಣುವಂ

ತಾಗಲಿ ನಮ್ಮ ಜೀವನ ಅಂಥ ದಿನವು ಬರುವುದೇ, ಬರದೇ ಏನು ? ಮತ್ತೆ ಬೇರೆ ಬೇರೆ ತರಹ ಸಮಾಧಾನವಾಗುವ ಓಲೆಯನ್ನು ಬರೆಯಲೇ? ಏನು ಬರೆಯಲಿ?''

ಎಂದು ಮತ್ತೊಂದು ಓಲೆಯನ್ನು ತೆಗೆದುಕೊಂಡು ತನ್ನ ಮನದಾಸೆಯನ್ನು ಬರೆಯಲನುವಾದಳು.

ಎನ್ನ ಪ್ರಾಣೇಶ್ವರ,

ಈ ವಿರಹ ನಮ್ಮಿಬ್ಬರ ಜೀವನದಲ್ಲೇ ಮೊದಲ ಕಹಿ ಅನುಭವ. ಅದು ಸಿಹಿಯಾಗಬೇಕೆಂಬುದೇ ಇಬ್ಬರ ಬಯಕೆ. ಆದರೆ ಸಿಹಿಯು ಬೇಗ ಕಹಿಯಾಗುವುದು. ಆದರೆ ಆ ಕಹಿಯು ಸಿಹಿಯಾಗಬೇಕಾದರೆ ಕಷ್ಟ ಸಾಧ್ಯ. ಅದೇ ನಮ್ಮಿಬ್ಬರ ಮೇಲೆ ಬಿದ್ದಿರುವ ಹೊರೆ. ಆದರೆ ಈ ಪ್ರಯತ್ನ ಸಫಲವಾಗುವುದರಲ್ಲಿ ನನಗ ಅನುಮಾನವಿಲ್ಲ. ಕಾಲಿ ಬರುವವರಗೆ ಹಲ್ಕುಡಿ ಕಚ್ಚಿಕೊಂಡು ಇರೋಣ. ನಮ್ಮ ತಾಯಿಗೆ ಬುದ್ಧಿ ಬಂದು ಕರೆಸಿಕೊಳ್ಳ ಬಹುದು. ಸದಾ ನಿಮ್ಮ ಚಿಂತೆಯಲ್ಲಿರುವ ಮಗಳ ಚಿಂತೆಯೇ ಆಕೆಗೆ ಹೆಚ್ಚಾಗಿದೆ. ಆಕೆ ಪರಿವರ್ತನೆಯಾಗುವುದನ್ನೇ ಕಾಯುತ್ತಿರುವೆ. ಆದರೆ ನೀವು ನನ್ನನ್ನು ಕಡೆಗಣಿಸದೆ, ಎಷ್ಟೇ ತಪ್ಪಿದ್ದರೂ ಕ್ಷಮಿಸಬೇಕೆಂದು ವಿನಮ್ರವಾಗಿ ಪ್ರಾರ್ಥಿಸುತ್ತೇನೆ.

ತಮ್ಮ ಪ್ರೇಮ ಭಿಕ್ಷೆ ಬೇಡುವ
ಮಲುಹಣೆ.

ಓಲೆ ಬರೆದು ಮುಗಿಸುತ್ತಿದ್ದಂತೆಯೇ ಸ್ವರೂಪ್ ಬಂದಳು. ಅದನ್ನು ಕೊಟ್ಟು ''ಸ್ವರೂಪ್ ದಯವಿಟ್ಟು ಅವರಿಗೆ ತಲುಪಿಸಿಬಿಡು. ಅವರು ಇದಕ್ಕಾಗಿ ಕಾತುರಪಡುತ್ತಿರಬಹುದು''

"ಆಗಲಿ ಅಮ್ಮಾ" ಎಂದು ತೆಗೆದುಕೊಂಡು ಹೊರಡಲು ಸಿದ್ಧಳಾಗಲು,

"ಅವರು ಈಗ ಎಲ್ಲಿದ್ದಾರೆ"

"ಈ ಊರಲ್ಲೇ ಇದ್ದಾರೆ ಮಲುಹಣೇ.."

"ಹಾಗಾದರೆ ನಾನು ಅವರನ್ನು ನೋಡಬೇಕೆನ್ನಿಸಿದೆ. ಮೊದಲು ಕೊಟ್ಟು ಅಭಿ ಪ್ರಾಯವನ್ನು ಸಂಗ್ರಹಿಸಿಕೊಂಡು ಬಾ"

"ಆಗಲೀ..ಸ್ನೇಹಿತೆ ಅಂದಮೇಲೆ ಎಷ್ಟು ಸಾಧ್ಯ ನಮ್ಮ ಕೈಯಲ್ಲಿ ಅಷ್ಟು ಮಾಡ್ಲೇ ಬೇಕು" ಎಂದು ಅಲ್ಲಿಂದ ಹೊರಟಳು.

***********

ಪದ್ಮಾವತಿ ಮಂಚದ ಮೇಲೆ ಮಲಗಿ ಮಗಳನ್ನು ಹೇಗೆ ದಾರಿಗೆ ತರುವುದು ಎಂಬ ಯೋಚನೆಯ ಗುಂಗಿನಲ್ಲಿದ್ದಳು. ಅಷ್ಟು ಹೊತ್ತಿಗೆ "ಪದ್ಮಾವತಮ್ಮನವ್ರೇ" ಎಂಬ ದನಿಯು ಆಕೆಯನ್ನು ಎಚ್ಚರ ಮಾಡಿತು. ಅದು ಸರೋಜ್ ಧ್ವನಿ ಎಂದು ಗೊತ್ತಾಯಿತು.

"ಏನು?" ಎಂದಳು.

"ಮಲುಹಣೆ ಚೆನ್ನಾಗಿ ಕುಡಿದು ಬಾಯಿಗೆ ಬಂದಂತೆ ಮಾತಾಡುತ್ತಿದ್ದಾಳೆ"

"ಏಕೆ ?"

"ದ್ರಾಕ್ಷಾರಸ ಕುಡಿದು"

"ಹಾಗಾ....?"

ಎಂದು ಆಕೆಯ ಕೋಣೆಗೆ ಬಂದಳು. ಆಕೆಯ ಸ್ಥಿತಿಯನ್ನು ದೂರದಲ್ಲೇ ನಿಂತು ಗಮನಿಸಿದಳು.

ಮಲುಹಣೆ ತಲೆ ಕೆದರಿ ಹುಚ್ಚಿಯಂತಿದ್ದಾಳೆ. ಚಿನ್ನದಂಥ ಕೂದಲುಗಳು ಹಾರುತ್ತಿರಲು ಮಿಂಚುತ್ತಿದೆ, ಮುಖದಲ್ಲಿ ಬೆವರಿನ ಹನಿಗಳು, ಕಣ್ಣುಗಳೆಲ್ಲಾ ಕೆಂಪಾಗಿವೆ. ವಿಚಿತ್ರ ನಗುವಿನಿಂದ ದೇಹದ ಮೇಲೆ ಪ್ರಜ್ಞೆ ಇಲ್ಲದೆ ಏನೇನೋ ಮಾತನಾಡುತ್ತಿದ್ದಾಳೆ.

"ಎಂಥ ಕಷ್ಟವಾಗಿದ್ದರೂ....ದೇಹಾಲಸ್ಯವಾದಾಗ... ನೀನೇ ದೇವತೆ... ಮಧುಪಾನ...ಸ್ವರ್ಗ..ಮಧುಪಾನ" ಎಂದು ಮುತ್ತಿಟ್ಟು ರುಚಿ ನೋಡುತ್ತಾ" ಅದಕ್ಕೇನಂತೆ ದೇವಾಧಿದೇವತೆಗಳೇ ಸಂತೋಷಕ್ಕೆ ಸುರಪಾನ ಮಾಡುತ್ತಾರೆ"

ವಿಚಿತ್ರ ನಗುವಿನಿಂದ ಗಾಳಿಗೆ ಹಾರುತ್ತಿದ್ದ ಕೂದಲುಗಳನ್ನು ಎಡ ಕೈಯಿಂದ ತಳ್ಳಿಕೊಂಡು ಬಲಕೈನ ಲೋಟದಿಂದ ಕುಡಿಯುತ್ತಾ, ರುಚಿಯನ್ನು ಸವಿಯುತ್ತಾ ಲೊಚ್ಚೆ ಹಾಕುತ್ತಾ..

"ನೀನೊಬ್ಬ ಇಲ್ಲದಿದ್ದರೆ ನನ್ನ ಜೀವನವೇ ನಡೆಯುತ್ತಿರಲಿಲ್ಲ... ಹ್ಹಾಂ...ನಿನ್ನಲ್ಲಿ ಮಲುಹಣನನ್ನು ಕಾಣುತ್ತಿದ್ದಾನೆ.....ಬಾ...ಮಲುಹಣಾ.... ಬಾ.."ಎಂದು ಮತ್ತೆ ಅದಕ್ಕೆ ತುಟಿಗಳನ್ನೊತ್ತಿದಳು.

"ಮಲುಹಣಾ..ನೀನು ಕೊಟ್ಟ ಮುತ್ತಿನಷ್ಟು ಸವಿ ಇಲ್ಲಿದೆ...ಇದರಲ್ಲಿ ಕಡು ತೃಪ್ತಿಪಡಬೇಕಾಗಿದೆ."

ಕೂಡಲೇ ಕಂಗಳಲ್ಲಿ ನೀರು..

"ಹಾಳಾಗ ಈ ಕುಡಿಯುವುದನ್ನು ನಿಲ್ಲಿಸುತ್ತೇನೆ ಎಂದರೂ ಸಾಧ್ಯ ವಿಲ್ಲ. ಅಸಾಧ್ಯ ಚಳಿ, ಹಿಮದ ಕೊರೆತ ಬೇರೆ.."

"ಮಾಡುವುದೇನು ಕುಡಿಯುವುದು..ಸುಖದ ಸ್ವರ್ಗವನ್ನು ಅನುಭ ವಿಸುವುದು"

"ಕುಡಿದೆ...ಕುಡಿದೆ...ಗಂಟಲು ತುಂಬ ಕುಡಿದೆ...ಅಮಲೇರಿ ಕುಣಿದೆ. ಇನ್ನಾದರೂ ನಿದ್ದೆ ಚೆನ್ನಾಗಿ ಬರಲಿ."

ಎಂದು ಮಂಚದ ಮೇಲೊರಗಿದಳು.

ಪದ್ಮಾವತಿ ಕೆಮ್ಮುತ್ತಾ..

"ಮಲುಹಣೇ...ಮಲುಹಣೇ..."

"ಯಾರು ?"

"ನಾನು ಕಣೇ ನಿಮ್ಮಮ್ಮ"

"ನಿಮ್ಮಮ್ಮನಾದರೇನು ನಂಗೆ"

"ಯಾಕೆ ಇಷ್ಟು ವಿಚಿತ್ರವಾಗಿಬಿಟ್ಟೆ ?"

"ನೀನೇಕೆ ವಿಚಿತ್ರವಾದೆ ?"

"ಮಲುಹಣೇ....ನಾನು ಕಣೇ.."

ಅಷ್ಟರಲ್ಲಿ ಅಮಲು ನಿಂತು ಎಚ್ಚೆತ್ತು..

'ಏನಮ್ಮಾ ?"

"ಏನೇ ಹೇಳು ಮಲುಹಣೇ ನೀನು ನನ್ನ ಮಗಳು. ನನ್ನ ಸರ್ವಸ್ವ ಈ ಮುದಿ ವಯಸ್ಸಿನಲ್ಲಿ ಇನ್ನಾರು ನನಗೆ ಗತಿ? ನೀನೇ...ನೀನು ನನ್ನನ್ನು ಅರ್ಥಮಾಡಿಕೊಂಡಿಲ್ಲ. ಮಾಡಿಕೊಂಡಿದ್ದರೆ ಹೀಗಾಡುತ್ತಿರಲಿಲ್ಲ. ನೀನಿನ್ನೂ ತಾಯಿಯಾಗಿಲ್ಲ. ತಾಯಿಯಾಗಿದ್ದರೆ ತಾಯಿಯ ಕರುಳನ್ನು ಹೊಂದಿದ್ದರೆ ಹೀಗನ್ನುತ್ತಿರಲಿಲ್ಲ. ನನ್ನ ಅಂಗಾಂಗದ ಒಂದೊಂದು ಭಾಗವೂ ನಿನ್ನನ್ನು ಜೋಪಾನ ಪಡಿಸಿದೆ. ಈ ಹೊಟ್ಟೆ ಒಂಭತ್ತು ತಿಂಗಳು ಹೊತ್ತು ಹೆತ್ತು, ಈ ಕೈಗಳು ನಿನ್ನನ್ನು ಎತ್ತಿ ಆಡಿಸಿದವು. ಈ ಎದೆಯ ಶಕ್ತಿಯನ್ನೆಲ್ಲಾ ಕುಡಿಸಿ ಬೆಳೆಸಿದೆ. ಈ ನಡು ನಿನ್ನನ್ನು ಹೊತ್ತು ಆಡಿಸಿತು. ಈ ತುಟಿಗಳನ್ನು ಕೆನ್ನೆಯ ಮೇಲೊತ್ತಿ ಪ್ರೀತಿ ವಾತ್ಸಲ್ಯ ತೋರಿದೆ. ನನ್ನ ಕಂಗಳು ನಿನ್ನ ನೋಟ, ಮೂಗು, ನಿನ್ನ ಸುಗಂಧದುಸಿರನ್ನು ಕುಡಿದು ನಿನ್ನ ಮುಖಕ್ಕೆ ನನ್ನಮುಖ ಮುಂಡಾಡಿ ಪ್ರೀತಿ ತುಂಬಿದೆ. ಈ ಕಾಲುಗಳು ನಿನ್ನನ್ನು ಎತ್ತಿ ತಿರುಗಾಡಿಸಿದೆ. ಈ ತೊಡೆಯ ಮೇಲದೆಷ್ಟು ಪವಡಿಸಿದ್ದೀಯೆ? ಹೀಗಿರುವಾಗ ನಾನು ನಿನ್ನನ್ನು ಕೇಳಬಾರದೆ? ಮಗಳೆನ್ನುವ ಹಕ್ಕು ನನಗಿಲ್ಲವೇ ? ನನ್ನ ಮಾತನ್ನು ನೀನು ನಡೆಸಿಕೊಡ ಬಾರದೇ ?"

"ಅಮ್ಮಾ ಆ ರೀತಿ ಕಾಪಾಡಿದ ತಾಯಿ ಮಗಳ ಸುಖವನ್ನು ಅರಸದಿದ್ದರೆ ಹೀಗಾಗುತ್ತಿತ್ತೇ. ನನ್ನ ಹಾಳು? ನೈತಿಕ ಭಂಗಕ್ಕೆ ಬಂದರೆ ನನ್ನ ಮನಸ್ಸು ಇಷ್ಟಪಡುವುದಿಲ್ಲ. ಇದು ಮಾನಾಪಮಾನಗಳ ಪ್ರಶ್ನೆ. ಮಾನವೀಯತೆಯನ್ನು ಉಳಿಸಿಕೊಳ್ಳುವುದು, ಪ್ರತಿಯೊಬ್ಬ ಮನುಷ್ಯನ ಕರ್ತವ್ಯ"

"ಹೋಗು ಮುಖ ತೊಳೆದು ಶೃಂಗಾರ ಮಾಡಿಕೋ ಹೋಗು"
"ನಾನು ಸಿಂಗಾರ ಮಾಡಿಕೊಂಡು ಯಾರಿಗೆ ತೋರಬೇಕಾಗಿದೆ?"
"ನಿನ್ನ ಸಂತೋಷ"
ಎಂದು ಹೇಳಿ ಪದ್ಮಾವತಿ ಹೊರಟಳು.

ಮಲುಹಣೆಯ ಮನಸ್ಸು ನಾನಾ ರೀತಿಯಲ್ಲಿ ಯೋಚಿಸತೊಡಗಿತು.

ಸ್ವರೂಪ್, ಸರೋಜ್, ತಾಯಿ, ಎಲ್ಲರೂ ಆತನನ್ನು ಮರೆತುಬಿಡು ಅಂತಾರೆ. ಸಮಾಧಾನವಾಗಿರು ಅಂತಾರೆ. ಹೇಗಿರಲಿ? ಇರಲಿಕ್ಕೆ ಸಾಧ್ಯ ಎಲ್ಲಿ? ಕಣ್ಣಿಗೆ ಕಣ್ಣಾದ ಪ್ರೇಮಿಯನ್ನು ಮರೆಯುವುದು ಹೇಗೆ? ಹಿಂದಿನ ದಿನಗಳು, ಆತ ಪ್ರೇಮಿಸಿದ, ಕಾಮಿಸಿದ ದಿನಗಳು, ರಾತ್ರಿಗಳು ಮರೆಯಲಿಕ್ಕೆ ಸಾಧ್ಯ ವೇ? ಆತನ ಬಂಧನ, ಚುಂಬನ, ಅಂಗವಿಲಾಸದ ಸೊಬಗನ್ನು ಮರೆಯುವುದಾದರೂ ಹೇಗೆ? ಆ ಚಿಗುರು ಮೀಸೆಗಳ ಸ್ಪರ್ಶ, ಕೆಂದುಟಿಗಳ ಸವಿ,ಇಂಬು ಕೊಟ್ಟ ರತಿವಿಲಾಸ ಮರೆಯಲು ಹೇಗೆ ಸಾಧ್ಯ? ಅಭ್ಯಂಗ ಸ್ನಾನ ಮಾಡಿದಾಗ ಅದೆಷ್ಟು ಸುಂದರನಾಗಿ ಕಾಣುತ್ತಿದ್ದ. ಮುಂಗುರುಳು ಗಾಳಿಗೆ ನರ್ತಿಸಿ ಆತನ ಹಣೆಯನ್ನು ಮುದ್ದಿಡುವಾಗ ಆ ಲಾಸ್ಯವೇನು ? ಆತನ ಸುಗಂಧದುಸಿರೇನು? ಆತ ಮುಗಳ್ನಕ್ಕಾಗ ಎಷ್ಟೊಂದು ಚೆನ್ನಾಗಿರುತ್ತಿದ್ದ? ಪ್ರೇಮ ಚೆಲ್ನಾಟ ಪ್ರಿಯನಾದ ಆತ ಯಾರಿಗೆ ಬೇಡವೆನಿಸುತ್ತದೆ? ಸಂಭೋಗದಲ್ಲಿ ತೃಪ್ತಿ ಕೊಡುತ್ತಿದ್ದ. ಆತ ಎಂಥ ವಿಲಾಸ ಪ್ರಿಯ, ಕಾಮಶಾಸ್ತ್ರಕಲಾ ಪಂಡಿತ. ಅದರ ಮುಂದೆ, ಈ ಭಕ್ಷ್ಯ ಭೋಜ್ಯಗಳು ನಿಸ್ಸಾರ. ಆತನ ಪ್ರೀತಿ ಅದೆಷ್ಟು ಮಧುರ? ಆತನನ್ನು ಕಳೆದುಕೊಂಡು ವಿರಹದಲ್ಲಿರುವ ನಾನೆಂಥ ನತದೃಷ್ಟೆ.

ಬೆರಳಿಗೆ ಬೆರಳ ಹೆಣೆದು ತಿಂಗಳ ಬೆಳಕಿನಲ್ಲಿ ಮಂಚದ ಮೇಲೆ ಮೆರೆದ ದಿನಗಳು. ಮಧುಚಂದ್ರ. ಮೊದಲರಾತ್ರಿ. ಮರು ರಾತ್ರಿಗಳು. ದಿನಗಳು ಒಂದಕ್ಕಿಂತ ಒಂದು ಸಿಹಿ. ಹೊಸ ಹೊಸ ದಿನಗಳು, ನಡೆಗಳು, ಅನುಭವಗಳು, ಪ್ರೇಮ, ಕಾಮ, ಎಷ್ಟೊಂದು ಚೆನ್ನಾಗಿತ್ತು? ನೀವು ಪ್ರೇಮಿಸಿದಾಗ ಎಷ್ಟು ಚೆಂದ! ಕಾಮಿಸಿದಾಗ ಎಷ್ಟು ಅಂದ, ಕೋಪಿಸಿಕೊಂಡಾಗ ಮತ್ತೊಂದು ರೀತಿ.

ದೃಷ್ಟಿಸಿದಾಗ ಒಂದು ರೀತಿ ಸೊಗಸು. ಋತು ಋತುಗಳಲ್ಲಿಯೂ ನಿನ್ನಂಗ ವಿಲಾಸ ಅಮರ. ಇದನ್ನೆಲ್ಲಾ ಮರೆತು ಜೀವಿಸುವುದು ನನ್ನಿಂದ ಸಾಧ್ಯವಿಲ್ಲ. ಇದನ್ನೆಲ್ಲಾ ಬಿಟ್ಟು ಆತ್ಮಹತ್ಯೆ ಮಾಡಿಕೊಳ್ಳುವುದೇ ಲೇಸು. ಈ ವಿರಹ ತಾಪದಿಂದಿರುವುದಕ್ಕಿಂತ ಆತ್ಮಹತ್ಯವೇ ಲೇಸು. ಅದೇ ಸ್ವರ್ಗ ನನ್ನ ಭಾಗಕ್ಕೆ. ಹತ್ತಿರದಲ್ಲಿದ್ದ ಹಗ್ಗವನ್ನು ತೆಗೆದುಕೊಂಡು ಕಟ್ಟಲಾರಂಭಿಸಿದಳು ತೊಲೆಗೆ.

ಮಲುಹಣೆಯನ್ನು ಊಟಕ್ಕೆ ಕರೆಯಲು ಪದ್ಮಾವತಿ ಬಂದು ನೋಡಿ ಗಾಬರಿಯಿಂದ..

'ಮಲುಹಣೇ...ಮಲುಹಣೇ...ಏನು ಮಾಡ್ತಾ ಇದ್ದೀಯೆ ?''

ಮಲುಹಣೆ ಉತ್ತರ ಕೊಡದೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

''ಸುಮ್ಮನೆ ಈ ಯೋಚನೆ ದುಃಖದಿಂದ ಏನೂ ಪ್ರಯೋಜನವಿಲ್ಲ. ದೇಹ ಈಗ ಕೃಶವಾಗಿರುವುದೇ ಸಾಲದೇ ?''

''ದೇಹ ಇನ್ನೂ ಬೆಳೆದು ಏನು ಸಾಧಿಸಬೇಕಾಗಿದೆ ಹೇಳವ್ವಾ ? ವಿರಹ ವೇದನೆಯ ಕೊನೆಯ ಹಂತವನ್ನು ಮುಟ್ಟಿರುವ ನನ್ನ ಕಷ್ಟ ಇನ್ನೇನಾಗಬೇಕು? ದೇಹ ಬಲಿಯಾಗಬೇಕು. ಮರಣವನ್ನಪ್ಪಲೇಬೇಕು, ಅದಕ್ಕೆ ಇದೊಂದು ಸಾಧನ''

ಮತ್ತೆ ಅಳುವು ಮರುಕಳಿಸಿತು. ಹರಿವ ಕಣ್ಣೀರನ್ನು ಒರೆಸಿ ಕೊಳ್ಳುತ್ತಾ..

''ನಿನ್ನ ಹೊಟ್ಟೆಗೆ ಹಾಲನ್ನು ಹೊಯ್ಯುವಷ್ಟು ಸಂತೋಷವಾಗಲೆಂದೇ ನಾನು ಈ ಲೋಕವನ್ನು ಬಿಟ್ಟು ಹೋಗುತ್ತಿದ್ದೇನೆ.''

''ಇನ್ನು ನಾನೆಷ್ಟು ಕಾಲ ಬದುಕಬೇಕು? ನನ್ನ ಕಾಲ ಮುಗಿಯಿತು. ನಿನ್ನ ಜೀವನದ ಸುಖಕ್ಕೇ ಇಷ್ಟೆಲ್ಲಾ ಮಾಡಿದೆ.''

''ಮಲುಹಣನನ್ನು ಹೊರದೂಡಿ, ನನ್ನ ವ್ರತ ಭಂಗವಾಗುವಂತೆ ಮಾಡಿದೆ, ಆದರೆ ನಾನು ಸಂಕಲ್ಪ ಸಾಧಿಸುತ್ತಿದ್ದೇನೆ''

''ನನ್ನನ್ನೇ ಕೊಂದುಬಿಡು, ನಾನು ಮುದಿಗೊಡ್ಡು ಇದ್ದೇನಾಗ ಬೇಕು?''

"ಐಶ್ವರ್ಯದ ಮೇಲೆ ಕುಳಿತು ಓಲಾಡಬೇಕಲ್ಲಾ"

"ಮಲುಹಣೇ...ನನ್ನ ಹೊಟ್ಟೆಗೆ ಸುಣ್ಣ ಹಾಕಬೇಡ. ನಾನು ಇನ್ನು ನಿನ್ನ ತಂಟೆಗೆ ಬರುವುದಿಲ್ಲ..ಇನ್ನಾದರೂ ಸುಖವಾಗಿರು"

"ನಾನೆಂಥ ಸುಖಿ...ಮಲುಹಣನಿಲ್ಲದೆ ?"

ಪದ್ಮಾವತಿ ಹಗ್ಗವನ್ನು ಕಿತ್ತಸೆದು,

"ನಡೆ ಊಟಕ್ಕೆ...." ಎಂದು ಕರೆದುಕೊಂಡು ಹೊರಟಳು.



ಮಲುಹಣನಿಗೆ ಇತ್ತೀಚೆಗೆ ಮನುಷ್ಯರ ಸಂಪರ್ಕವೇ ಬೇಡವೆನಿಸಿತು. ಊರ ಹೊರಗಡೆ ಪ್ರಕೃತಿ ಸೌಂದರ್ಯದ ಮಡಿಲಲ್ಲಿ ಅಲೆದಾಡುವುದು ಹೆಚ್ಚಾಯಿತು. ಅಂದು ಮಳೆ ವಿಪರೀತವಾಗಿ ಬೀಳಲಾರಂಭಿಸಿತು. ಚಳಿಯಾದರೂ ಹೆಚ್ಚಿಗೆ ಬಟ್ಟೆಯಿಲ್ಲ. ಹೊದ್ದುಕೋ ಎಂದು ಕೊಡುವವರಿಲ್ಲ. ತಂದೆಯ ಆರೈಕೆ ಆತನ ಕಣ್ಮುಂದೆ ಸುಳಿಯಿತು. ಸಿಡಿಲು, ಮಿಂಚು, ಗುಡುಗಿನ ಆರ್ಭಟ ಹೆಚ್ಚಿ ಮಳೆ ಹೊಯ್ಯುತ್ತಿದ್ದುದನ್ನು ನೋಡಿದರೆ ಆತನ ಮೈಯ ಕೊಳಯನ್ನೇ ತೊಳೆಯಲು ಮಳೆ ಬರುತ್ತಿದೆಯೋ ಎನ್ನುವಂತಿತ್ತು. ಚಳಿಯಲ್ಲಿ ನಡುಗುತ್ತಾ ದೇವಸ್ಥಾನದಲ್ಲಾದರೂ ಮಲಗಿಕೊಳ್ಳೋಣ ಎಂದು ಕಟಕಟನೆ ನಡುಗುತ್ತಾ ಹೊರಟ. ಪೂಜಾರಿ ಬೀಗಮುದ್ರೆ ಮಾಡಿ ಮನೆಗೆ ಹೊರಟಿದ್ದ.

"ಮಲುಹಣನು ವಿಜಯೇಶ್ವರನಿಗೂ ಸಲ್ಲದವನಾದನು. ಆದುದರಿಂದಲೇ ಬೀಗ ಮುದ್ರೆಯಾಯಿತು. ತಂದೆ ಕಟ್ಟಿಸಿದರೇನಾಯ್ತು? ತಂದೆಯು ಮಾಡಿದ ಪುಣ್ಯವು ಮಗನಿಗೆ ಸ್ವಲ್ಪವಾದರೂ ಬೇಡವೇ ?"

"ಸರ್ವವನ್ನೂ ಅರ್ಪಿಸಿದ ಅವಳೇ ನನ್ನ ಹೊರದೂಡಿದಳೆಂದರೆ ಬೇರೆಯವರ್ಯಾರು ಕೊಡುತ್ತಾರೆ? ನಾನು ಬಿಸಿಲಲ್ಲಿ ಒಣಗಬೇಕು, ಮಳೆಯಲ್ಲಿ ನೆನೆಯಬೇಕು, ಚಳಿಯಲ್ಲಿ ನಡುಗಬೇಕು, ಗಾಳಿಯಲ್ಲಿ ಸಿಲುಕಬೇಕು ಮಂಜಿನಲ್ಲಿ ಕೊರೆಯಬೇಕು, ಇಂತು ವಿಧಿ ಸಂಕಲ್ಪವಾಗಿರುವಾಗ ಯಾರು ತಾನೇ ಏನು ಮಾಡಿಯಾರು?"

ಮೂರು ತಾಸುಗಳಲ್ಲಿ ಮಳೆ ಬಿದ್ದು ಪ್ರಕೃತಿ ಸ್ವಚ್ಛವಾಗಿತ್ತು. ಬಟ್ಟೆಗಳನ್ನೆಲ್ಲಾ ಕೊರೆದು ಇಂಡುಕೊಂಡ. ಪಾಪ, ಸ್ನಾನ ಮಾಡಿ ಎಷ್ಟೋ ದಿನಗಳಾಗಿ ದೇಹವೆಲ್ಲಾ ಜಡತೆಯಿಂದ ತುಂಬಿತ್ತು. ತನ್ನ ಮೈ ಕೈಗಗಳ ವಾಸನೆಯೇ ಆತನಿಗೇ ಹಿಡಿಸಲಿಲ್ಲ. ಹಿಂದೆ ಅನೇಕ ಭಿಕ್ಷುಕರನ್ನು ಈ ಸ್ಥಿತಿಯಲ್ಲಿ ಕಂಡಿದ್ದನು. ಆದರೆ ಇಂದು ಆತನ ಜೀವನದಲ್ಲಿ ಅವನೇ ಸ್ವತಃ ಅನುಭೋಗಿಸಬೇಕಾಯಿತು.

ಹಿಂದಿನ ದಿನಗಳನ್ನು ನೆನೆದು ಅಳುತ್ತಾನೆ, ಪಶ್ಚಾತ್ತಾಪ ಪಡುತ್ತಾನೆ, ಮತ್ತ ಸಮಾಧಾನ ಹೊಂದುತ್ತಾನೆ.ತಾನು ಮಾಡಿದುದು ತಪ್ಪು, ತಂದೆ ತೋರಿದ ಯಾವ ಹೆಣ್ಣನ್ನು ಆರಿಸಿ ಮದುವೆಯಾಗಿದ್ದರೂ ಸುಖಜೀವನ ನಡೆಸಬಹುದಾಗಿತ್ತು ಎಂದು ಯೋಚಿಸುತ್ತಾನೆ. ಜೂಜು, ಹೆಣ್ಣು, ಕುಡಿತ ಇವು ಮೂರೂ ಮನುಷ್ಯನು ಕ್ಷೀಣವಾಗಲು ಕಾರಣ ಎಂದು ತಾನು ಕಾವ್ಯ ದಲ್ಲಿ ಓದಿದುದನ್ನು ಜ್ಞಾಪಿಸಿಕೊಳ್ಳುತ್ತಾನೆ.

ಅಷ್ಟು ದಿನಗಳಿಂದಲೂ ಸುಖದ ಸುಪ್ಪತ್ತಿಗೆಯಲ್ಲಿದ್ದುದಕ್ಕೆ ಇಂದು ಭಿಕಾರಿಯಾಗಿ ಐಶ್ವರ್ಯ ಕೊಟ್ಟವರಿಗೆ, ಮಿತ್ರರಿಗೆ, ನೆರೆ ಹೊರೆಯವರಿಗೆ ಬೇಡವಾದ. ಈ ರೀತಿ ಹಂದಿಯಾಗಿ ಹತ್ತು ವರ್ಷ ಬಾಳುವುದಕ್ಕಂತ ನಂದಿಯಾಗಿ ಒಂದೇ ವರ್ಷವಿದ್ದರೆ ಸಾಕಾಗಿತ್ತು. ಜೀವಿಸಿ ಏನು ಪ್ರಯೋಜನ? ಆತ್ಮಹತ್ಯೆ ಏಕೆ ಮಾಡಿಕೊಳ್ಳಬಾರದು ? ಏಕೋ ಮನಸ್ಸು ಒಪ್ಪುತ್ತಿಲ್ಲ. ಮಾಡಿದ ತಪ್ಪಿಗೆ ಅನುಭೋಗಿಸಲೆಂದೇ ಬ್ರಹ್ಮ ನನಗೆ ಆಯುಸ್ಸನ್ನು ಹೆಚ್ಚು ಬರೆದಿದ್ದಾನೆಯೋ ಏನೋ ತಿಳಿಯದು. ಇಷ್ಟೆಲ್ಲಾ ಮನಸ್ಸು ಗಟ್ಟಿ ಮಾಡಿಕೊಂಡರೂ ಮತ್ತೆ ಹೆಣ್ಣು, ಮಣ್ಣು, ಹೊನ್ನಿನತ್ತ ಓಲುತ್ತದೆ. ಇದು ದೈವ ನೇಮಕವೇನೋ? ಅದನ್ನು ಎಷ್ಟು ತ್ಯಜಿಸಿದರೂ ಮತ್ತೆ ಮತ್ತೆ ಬಯಸುವುದನ್ನೂ ನೋಡಿದರೆ ನನಗೆ ವ್ಯಸನವಾಗುತ್ತದೆ. ಮಲುಹಣೆಯನ್ನು ಹೇಗೆ ಮರೆಯಲಿ? ಇಲ್ಲ ಮರೆಯಲು ಸಾಧ್ಯವೇ ಇಲ್ಲ. ಅವಳಿಗಾಗಿಯೇ ಇನ್ನು ಈ ಜೀವ ಉಳಿದಿದೆಯೋ ಏನೋ? ಜೀವನವು

ಸುಖ-ಕಷ್ಟಗಳ ಮಿಶ್ರಣ ಎನ್ನುತ್ತಾರೆ. ಹಿಂದೆ ಸುಖಪಟ್ಟೆ. ಮತ್ತೆ ಕಷ್ಟ ಪಡುತ್ತಿರುವ ನಾನು ಮುಂದೇಕೆ ಸುಖವನ್ನು ಅರಸಬಾರದು ?"

ಮನುಷ್ಯನ ಪ್ರಯತ್ನಕ್ಕಿಂತ ಬೇರೆ ಇದೆಯೇ? ಆಸೆ ಇರಬೇಕು, ಆಸೆ ಇಲ್ಲದಿದ್ದರೆ ಮನುಷ್ಯರು ಭೂಮಿಯ ಮೇಲೆ ಇರುತ್ತಿರಲಿಲ್ಲ. ಹಿಂದಿನ ದಿನಗಳನ್ನು ಮರೆಯದಿದ್ದರೆ ಹೇಗೆ? ದೇವರು ಮರೆವನ್ನು ಅದಕ್ಕೇ ಸೃಷ್ಟಿಸಿರುವುದು. ಪಶ್ಚಾತ್ತಾಪಕ್ಕೆ ಸಮಾಧಾನವೇ ಸಾಧನ.

ಇಷ್ಟವನ್ನೆಲ್ಲಾ ಲೆಕ್ಕ ಹಾಕುವಲ್ಲಿ ಬೆಳಕು ಹರಿಯಿತು. ತಾನು ನಿದ್ದೆಯಲ್ಲಿಲ್ಲ ಎಂದು ತಿಳಿಯಿತು.

ಸುಖವಿಲ್ಲದ ಜೀವಕ್ಕೆ ನಿದ್ದೆ ಏಕೆ ಬೇಕು?

ನಿದ್ದೆ ಇಲ್ಲದಿದ್ದರೆ ಆರೋಗ್ಯ?

ಯಾವ ಹೆಂಡತ ಮಕ್ಕಳನ್ನು ಕಾಪಾಡಲು ಆರೋಗ್ಯ? ನಾನು ಬಂದವನೂ ಒಬ್ಬನೇ, ಹೋಗುವವನೂ ನಾನೊಬ್ಬನೇ ? ಅದಕ್ಕೇಕೆ?

ಯೋಚನೆ ಏಕೆ? ಏನೂ ಇಲ್ಲದಿದ್ದರೆ ಯೋಚನೆಯೊಂದೇ ಕಾಲವನ್ನು ನೂಕಲು ಸಾಧನ.

ಜೀವನದಲ್ಲಿ ತಂದೆ ಅದೆಷ್ಟೋ ಪುಣ್ಯ ಕೆಲಸ ಮಾಡಿದರು. ಆದರೆ ನಾನು ಮಾಡಿಲ್ಲ. ಮಾಡಲು ಸಾಧ್ಯವಿಲ್ಲ. ಇದ್ದಾಗ ಯಾರಿಗೂ ಯೋಚನೆ ಬರುವುದಿಲ್ಲ. ಈಗ ಬಂದರೇನಾಯ್ತು? ಪಾಪಿಯು ಸಮುದ್ರಕ್ಕೆ ಹೋದರೂ ಮೊಣಕಾಲು ನೀರು ಎಂಬಂತೆ.

ಮಲುಹಣ ಹೊಟ್ಟೆ ಹಸಿವನ್ನು ತಾಳಲಾರದೆ ಅವರ ತಂದೆ ಕಟ್ಟಿಸಿದ ಅನ್ನ ಛತ್ರಕ್ಕೆ ಬಂದ. ಎಲ್ಲರೂ ಊಟಕ್ಕೆ ಕುಳಿತಿದ್ದರು. ಈತನು ಹೋಗಿ ಕೊನೆಯಲ್ಲಿ ಕುಳಿತ. ಮುಖವನ್ನೆಲ್ಲಾ ಮುಚ್ಚಿಕೊಂಡು ಊಟ ಬಡಿಸುವವನು ಈತನನ್ನು ನೋಡಿ ಪಕ್ಕದವನೊಡನೆ ಪಿಸಪಿಸನೆ..

"ಈತ ಮಲುಹಣ ಅಲ್ಲವೇ ?"

"ಹೌದು"

ಮಲುಹಣ ಬಗ್ಗಿ ತುತ್ತು ಕಟ್ಟಿ ಊಟ ಮಾಡುತ್ತಲೇ ಇದ್ದ.

"ಪಾಪ ತಂದೆ ಕಟ್ಟಿಸಿದ ಅನಾಥಾಲಯಕ್ಕೆ ಬಂದು ಹೊಟ್ಟೆ ಎಂಬ ಪಟ್ಟಣ ತುಂಬಿಸಬೇಕಾಯ್ತು"

"ಏನು ಮಾಡಲಿಕ್ಕಾಗುತ್ತದೆ ?"

ಊಟ ಮಾಡುವುದನ್ನು ನಿಲ್ಲಿಸಿ ಅವರ ಮಾತುಗಳನ್ನು ಕೇಳಿ ಕೂಡಲೇ ಊಟ ಬಡಿಸುವ ಮತ್ತೊಬ್ಬ..

"ಪರವಾಗಿಲ್ಲ ಊಟ ಮಾಡಿ...ಮಾಡಿ.' ಎಂದ.

ಊಟ ಗಂಟಲಿಗೆ ಇಳಿಯಲಿಲ್ಲ. ನೀರು ಕುಡಿದು ನೇರವಾಗಿ ಹೊರಟ.

"ಬನ್ನಿ....ಬನ್ನಿ.....ಊಟ ಮಾಡಿ" ಎಂದರೂ ಕೇಳದೆ ದುಃಖದಿಂದ ಹೊರಟ.

ಸ್ವರೂಪ್ ತಂದು ಕೊಟ್ಟ ಪತ್ರವನ್ನು ಓದಿ ಮನಸ್ಸನ್ನು ಹರ್ಷ ಮಾಡಿಕೊಂಡು ಮಲುಹಣೆಯನ್ನು ನೋಡಲೇಬೇಕು ಎಂಬ ಸಂಕಲ್ಪ ಮಾಡಿದ. ಕಾಲುಗಳು ಯಾಂತ್ರಿಕವಾಗಿ ಆಕೆ ಮನೆಯ ಹತ್ತಿರ ಬಂದವು. ಅಂದು ಅಮಾವಾಸ್ಯೆಯ ಕತ್ತಲು. ಹಿಮ ಜೋರಾಗಿ ಬೀಳುತ್ತಿತ್ತು. ಮಂಜು ಮಲೆಗಳು ದಾರಿ ದೀವಿಗೆಯಾಗಿ ದಾರಿ ತೋರಿದವು. ಚಳಿಗೆ ಕಟಕಟನೆ ನಡುಗುತ್ತಾ ನಿಶ್ಯಬ್ದದ ದಾರಿಗುಂಟ ನಡೆದೇ ಬಂದಿದ್ದಾನೆ. ರಾತ್ರಿಯ ಊಟದ ವೇಳೆ ಹೊಟ್ಟೆ ಹಸಿದು ಹಣ್ಣಾಗಿದೆ. ಎಲ್ಲಾದರೂ ಸ್ವಲ್ಪ ಊಟ ಸಿಕ್ಕಿದರೆ ಸಾಕು ಎನ್ನುವಂತಾಗಿದೆ. ಮಲುಹಣೆಯನ್ನು ಕೇಳಿಬಿಡೋಣವೇ? ಛೇ...ಎಲ್ಲಾದರೂ ಉಂಟೇ ? ಆಕೆಯನ್ನು ನೋಡಿದರೆ ಸಾಕು ಎಂದು ಲೆಕ್ಕ ಹಾಕಿದ. ಕತ್ತಲಲ್ಲೂ ಅತಿ ಬೇಗ ಪತ್ತೆ ಹಚ್ಚಿದ್ದ ಆಕೆಯ ಮನೆಯನ್ನು. ಅಲ್ಲೇ ಅಡ್ಡಾಡಿದ. ಹೊರಬರುವ ಚಿಹ್ನೆ ಕಾಣಲಿಲ್ಲ. ಮಂಜು ವಿಪರೀತ ಬೀಳಲು ಮಂಜಿನ ಗುಹೆಯಾದಂತೆ ಆಯಿತು ಆತನ ಮೇಲೆ. ಕೂಡಲೇ ಬಾಗಿಲು ತೆಗೆದ ಶಬ್ದವಾಯಿತು. ಮಲುಹಣನಿಗೆ ಮುಖ ಅರಳಿತು. ಮಲುಹಣೆ

ಬರಬಹುದು, ಆಕೆಯನ್ನು ನೋಡಬಹುದು, ಮಾತನಾಡಿಸಬಹುದು, ಆನಂದಪಡಬಹುದು, ನನ್ನನ್ನು ನೋಡಿ ಚಿಂತಿಸಬಹುದು ಎಂದು ನೋಡಲಾರಂಭಿಸಿದ. ಅಷ್ಟರಲ್ಲೇ ಬಾಗಿಲು ತೆಗೆದು ಬಂದ ವ್ಯಕ್ತಿ ಮುಖಕ್ಕೆ ಏನೋ ಎರಚಿದಂತಾಯಿತು. ಅದರ ವಾಸನೆಯಿಂದ ಕತ್ತಲೆಯಲ್ಲಿ ಕಣ್ಣು ಕೆಲಸ ಮಾಡದೇ ಹೋದರೂ ಮೂಗು ತಿಳಿಯಿತು. ಅದು ಎಂಜಲು, ಊಟದ ಎಂಜಲು ನೀರು ಎಂದು. ಕೂಡಲೇ ಬೆಕ್ಕಿನಂತೆ ಮುಖವನ್ನು ಒದರಿಕೊಂಡ.

"ನಾನೊಂದು ನೆನೆದರೆ ಆ ದೇವರೇ ಒಂದು ಬಗೆಯಿತು, ಎಂಜಲು ನೀರಿನಿಂದ ಮಜ್ಜನವಾಗಬೇಕೇ ?"

ವಿಷಾದವಾಗಿ ನಕ್ಕು..

"ಅದಕ್ಕೇನಂತೆ ಅಂದು ಮಲುಹಣೆಯ ಎಂಜಲನ್ನು ಸವಿದಿದ್ದೆ. ಇಂದು ಅದು ದೇಹದೊಳಗೆ ಪ್ರವೇಶಿಸಲಿಲ್ಲ. ಹೊರಗೆ ಆಯಿತು ಅಷ್ಟೆ ? ಮತ್ತೆ ನೋಡಿದ ಮಬ್ಬಿನಲ್ಲಿ ಯಾವ ವ್ಯಕ್ತಿ ಎಂಬುದು ಖಚಿತವಾಗಲಿಲ್ಲ. ಕೂಡಲೇ ಆ ವ್ಯಕ್ತಿ ಬಾಗಿಲನ್ನು ಭದ್ರಿಸಿಕೊಂಡು ಹೊರಟಿತು. ಮಲುಹಣೆಯಲ್ಲ ಆಕೆಯ ಸೇವಕಿಯೇ ಇರಬೇಕು. ಅದು ಪದ್ಮಾ ವತಿಯ ಎಂಜಲೋ, ಅಥವಾ ಸೇವಕಿಯದೋ ಯಾರದಾದರೇನು? ಅವರ ಮನುಷ್ಯ ರಲ್ಲವೇ? ಚಳಿಯಲ್ಲಿ ನಡುಗುತ್ತಾ..

"ಮಲುಹಣೇ...ಮಲುಹಣೇ.." ಎಂದು ಕೂಗಲಾರಂಭಿಸಿದ ಅರ್ಧಭಾಗ ಮಲುಹಣನಿಗರ್ಪಿತ ಎಂದು ಬಿಟ್ಟುಬಿಡುತ್ತಿದ್ದಳು. ಅದು ಮಲುಹಣನ ಮೇಲೆಯೇ ಬಿದ್ದಿದೆ ಎಂದು ಹೇಗೆ ಗೊತ್ತಾಗಬೇಕು? ಮಲುಹಣೆ ವೀಳ್ಯವನ್ನು ಸೇವಿಸಲು ಒಂದನ್ನು ತೆಗೆದುಕೊಂಡಳು. ಕೈ ನಡುಗಿತು, ಮನಸ್ಸಿಗೇಕೋ ಬೇಡವೆನಿಸಿತು. ಮೆಲ್ಲಮೆಲ್ಲನೆ ಕೊರಗುವ ದನಿಯು ಕಿವಿಯ ತಮ್ಮಟೆಗೆ ಮೃದುವಾಗಿ ಮುಟ್ಟಿತು. ಕೈಯಿಂದ ಹಾಗೆಯೇ ಎಲೆ ಕಳಚಿತು. ಯಾರ ಶಬ್ದವಿರಬಹುದೆಂದು ನೋಡಿದಳು. ಮನೆಯ ಮುಂದಿನಿಂದ ಬರುವಂತಾಯಿತು. ಕೂಡಲೇ ಎದ್ದು ಗಾಳಿಗೆ ಹಾರಾಡುತ್ತಿದ್ದ

ಪರದೆಗಳನ್ನು ಕೈಗಳಿಂದ ಸರಿಸಿ ಮಹಡಿಯ ಮುಂದೆ ಬಂದು ಮತ್ತೆ ಆ ದನಿಯನ್ನು ಆಲಿಸಿದಳು. ಅದು ಮಲುಹಣನದೇ ಇರಬಹುದೆಂಬ ಅನುಮಾನ ಆಕೆಯನ್ನು ಕಾಡಿಸಿತು. ಮಲುಹಣೇ..ಎಂಬ ವೇದನೆಯಲ್ಲಿ ಕೂಗಬೇಕಾದರೆ ಆತನೊಬ್ಬನೇ ಇರಬೇಕು. ಮತ್ತಾರೂ ಇಲ್ಲ ಎಂಬುದನ್ನು ಖಚಿತಮಾಡಿ ಕೊಂಡಳು. ಆಕೆಯು ಮತ್ತೆ ಮತ್ತ ನೋಡಿದಳು. ಆದರೆ ಕತ್ತಲೆಯಲ್ಲಿ ಯಾರು ಎಂದು ವ್ಯಕ್ತವಾಗಲಿಲ್ಲ, ಧ್ವನಿ ಮಾತ್ರ ಮನೆ ಮುಂದೆ ಸ್ವಲ್ಪ ದೂರದಲ್ಲಿ ಕೇಳಿಬರುತ್ತಿದ್ದುದು ಅರ್ಥವಾಯಿತು. ಯಾರೆಂಬುದನ್ನು ತಿಳಿಯುವ ಕುತೂಹಲ ಕೆರಳಿ ಸರಸರನೆ ಮಹಡಿಯಿಂದ ಕೆಳಗಿಳಿದಳು. ಕೈ ದೀಪದಿಂದ ನೋಡತೊಡಗಿದಳು, ಒಂದೆಡೆ ಗಾಳಿ, ಮಂಜು ದೀಪಕ್ಕೆ ಪಟ ಪಟನೆ ಬಡಿತ, ಹಾಗಾದರೂ ಛಲ ಬಿಡದೆ ಹುಡುಕಲಾರಂಭಿಸಿದಳು. ಮತ್ತೆ,

"ಮಲುಹಣೇ...ಮಲುಹಣೇ.." ಹೃದಯ ತುಂಬುವಂತೆ ಶಬ್ದ.

"ಯಾರು ಮಲುಹಣನೇ ?'

'ಹೌದು...ಏಕೆ ಇಷ್ಟು ಬೇಗನೆ ನನ್ನ ದನಿಯನ್ನು ಮರೆತು ಬಿಟ್ಟೆಯಾ?"

"ಇಲ್ಲ ಹೇಗೆ ಮರೆಯಲು ಸಾಧ್ಯ?ಜನ್ಮ ಜನ್ಮಕ್ಕೂ ಆ ಧ್ವನಿಯನ್ನು ಮರೆಯಲಸಾಧ್ಯ...ಮಲುಹಣ ಎಲ್ಲಿದ್ದೀಯೆ? ಈ ಕತ್ತಲು ಹಿಮದಲ್ಲಿ ದೀಪದ ಬೆಳಕಿನಲ್ಲೂ ನಿನ್ನನ್ನು ನೋಡಲಾಗುತ್ತಿಲ್ಲ. ಎಲ್ಲಿ ಬೇಗ ಮುಖ ತೋರು" ಎಂದು ಬರಲಾರಂಭಿಸಿದಳು.

ಅದನ್ನು ಕೇಳದ ಮಲುಹಣನಿಗೆ ಎಲ್ಲಿಲ್ಲದ ಆನಂದ ಉಂಟಾಯಿತು. ಖಂಡಿತ ಮಲುಹಣೆ ನನ್ನನ್ನು ವರಿಸುತ್ತಾಳೆ, ಆಲಿಂಗಿಸಿಕೊಳ್ಳುತ್ತಾಳೆ. ಸಿಹಿಯಾದ ಬಿಸಿ ಮುತ್ತೊಂದನ್ನು ಕೊಡುತ್ತಾಳೆ. ಮತ್ತೆ ಮನೆಗೆ ಕರೆದುಕೊಂಡು ಹೋಗಿ ಅಂಗವಿಲಾಸವನ್ನೀಯುತ್ತಾಳೆ ಎಂದು ಖಚಿತಪಡಿಸಿಕೊಂಡ. ಇಲ್ಲಿ ದಿದ್ದರೆ ಆಕೆ ಬರುತ್ತಿರಲಿಲ್ಲ. ಆಕೆಯ ಪತ್ರದಲ್ಲಿಬರೆದಿದ್ದಂತೆ ನನಗಿಂತ ಹೆಚ್ಚಿಗೆ ಕೊರಗುತ್ತಿದ್ದಾಳೆ, ಕಾಮದಾಹದ ಪರಿಹಾರಕ್ಕೆ ನನ್ನನ್ನು ಆಶ್ರಯಿಸು

ವುದರಲ್ಲಿ ಸಂಶಯವೇ ಇಲ್ಲ. ಪಾಪ ಬೇಗ ಹೋಗುವೆ, ಕೈಗಳಿಂದ ಬಂಧಿಸಿಕೊಂಡು ಅಪ್ಪಿ ಆನಂದಪಡುವೆ, ಆಸೆಯ ಅಲೆ ಉಕ್ಕೇರಿತು.

ಮಂಜನ್ನು ಸಹಿಸಿ ಹೊರಡಲೇ ಎನ್ನಿಸಿತು ಮನಸ್ಸು. ಆದರೆ ತನ್ನ ಸ್ಥಿತಿಯನ್ನು ಹೇಗೆ ಆಕೆಗೆ ತೋರಿಸುವುದು? ನನ್ನ ವೇಷಭೂಷಣವನ್ನು? ಆದರೇನು? ಆಕೆ ನನ್ನವಳಲ್ಲವೇ? ನಾನು ಹೇಗಿದ್ದರೂ ಆಕೆಗೆ ಸುಂದರ, ಅದಕ್ಕೇಕೆ ಅಂಜಿಕೆ, ಅಳುಕು? ಇಲ್ಲ, ಇಲ್ಲ, ನಾನು ಹೋಗಲಾರೆ. ನನ್ನ ರೂಪ ರೇಖೆಯನ್ನು ತೋರಿಸಲಾರೆ, ನಾನೆ ಆಕೆಯನ್ನು ನೋಡಿ ಸಂತೋಷಪಡುವೆ, ಆದರೆ ನನ್ನ ಕುರೂಪನ್ನು ಆಕೆಗೆ ತೋರಿ ಅಸಹ್ಯಪಡಿಸಿಕೊಳ್ಳಲು ಇಷ್ಟಪಡುವುದಿಲ್ಲ. ಮಲುಹಣೆ ಹತ್ತಿರವಾಗುತ್ತಿರಲು ಆಕೆಯ ರೂಪನ್ನು ನೋಡಿದ ಮಲುಹಣನು

"ಆಹಾ....ಮಂದಹಾಸಿನೀ..ಸುಂದರೀ...ಮಲುಹಣೆ...ಮಲುಹಣೇ" ಮಂಜಿನಲ್ಲಿ ಮರುಟುಗೊಂಡಿದ್ದು ಕೊರಗುತ್ತಿದ್ದ ಮಲುಹಣನ ಮುಖ, ಮಾತು ಮಲುಹಣೆಗೆ ಕಂಡಿತು. ದುಃಖ ಉಕ್ಕಿತು.

"ಅಯ್ಯೋ....ಮಲುಹಣೇ... ಈ ಹಿಮದಲ್ಲಿ ನೀವು ಮುಚ್ಚಿಕೊಂಡು ವಿರಹಕ್ಕೆ ತೆರವಾಗಿ, ತಾಪಕ್ಕೆ ತಂಪಾಗಲೆಂದು ಇದ್ದೀರಾ? ತೆಗೆಯಿರಿ, ಮಂಜು ಗಡ್ಡೆಗಳನ್ನು...ಮುಖವನ್ನು ತೋರಿಸಿ. ನಾನಿದನ್ನು ಕಣ್ಣಾರೆ ನೋಡಲಾರೆ."

"ಇದೋ .......ಹಿಮವನ್ನು ಕಳಚಿರುವೆ ನೋಡು ಮಲುಹಣೇ" ಎಂದು ಹಿಮವನ್ನು ಕೆದರಿದ. ದುಗುಡದ ದನಿಯಲ್ಲಿ ಮಾತು ಮುಂದುವರಿಸಿದ. "ಅಷ್ಟು ದಿನಗಳಿಂದಲೂ ಸಂತೋಷದ ತೂಗುಯ್ಯಾಲೆಯಲ್ಲಿ : ಸುಭೋಜನ ಉಂಡು ಬೆಳೆದು ಬಂದೆ. ಅದಕ್ಕೆ ಈಗ ನಾನು ಬೀದಿಯ ಭಿಕಾರಿಯಾದೆ, ಪರದೇಶಿಯಾದೆ, ತಂದುದನ್ನೆಲ್ಲಾ ಅನುಭೋಗಿಸಲೇಬೇಕಾಗಿದೆ ಮಲುಹಣೇ.."

"ನನ್ನ ತಾಯಿಯ ಹರಿದ ಗಾಲಿಯ ಕೀಲಿ ಮುರಿವತೆ ಮಾಡಲು ಕಾರಣಳು. ಇದರಲ್ಲಿ ಕಿಂಚಿತ್ ತಪ್ಪು ನನ್ನದಿಲ್ಲ, ನನ್ನನ್ನು ಕ್ಷಮಿಸಿಬಿಡಿ.

ಇದೇನು ಉಡುಗೆ? ಇದೇನು ತೊಡಿಗೆ? ನಿಮ್ಮ ರೂಪು? ನಿಮ್ಮ ಮೈಯೇನು? ನಿಜವಾಗಿ ಮಲುಹಣರೆಂದು ಪತ್ತೆ ಮಾಡಲೇ ಆಗುತ್ತಿಲ್ಲ. ಇದೇನು ಬಟ್ಟೆಯ ಮೇಲೆ..?"

"ಅದು ಊಟ ಮಾಡಿ ಎರಚಿದ ಎಂಜಲು ನೀರು"

"ನಿಜವೇ, ಯಾರು ಸುರಿದದ್ದು ?"

"ನಿನ್ನ ಸೇವಕಿ ಹೋಗು ಮಲುಹಣೇ ಬೇಗ ಹೋಗು, ನಿಮ್ಮ ತಾಯಿ ಬಂದು ನೋಡಿಯಾರು? ನೀನು ಬಾಗಿಲನ್ನು ಭದ್ರಿಸಿಕೊಂಡು ಹೊಸ ರಾಜಪುತ್ರರೊಡನೆ ಇಚ್ಛೆಯ ಮನೆಯಲ್ಲಿ ಬೆಚ್ಚನೆ ಇರು ಹೋಗು. ಕಳ್ಳ, ಕಾಕರ, ದೆವ್ವ, ಭೂತಗಳ, ಚಳಿ, ಗಾಳಿ, ಮಂಜಿಗೆ ಸಿಲುಕದೆ ಸೌಖ್ಯದಿಂದಿರು ಹೋಗು"

"ನೀನು ಕನಸು ಮನಸುಗಳಲ್ಲಿ ಅಧಿದೇವತೆಯಾಗಿ ಕುಣಿಯುವುದ ರಿಂದ ಇನ್ನೂ ಉಸಿರು ಉಳಿದು ಘಟ ಮಾತ್ರ ಜೀವಿಸುತ್ತಿದೆ. ಒಂದು ಸಾರಿ ನಿನ್ನ ಮುಖ ದರ್ಶನವಾಯ್ತು ಷ್ಟೆ, ಸಾಕು..... ಅಷ್ಟೇ ಪುಣ್ಯ ಮಲುಹಣಿ.."

"ನನ್ನ ವ್ಯಾಮೋಹದಲ್ಲಿ ಅದೆಷ್ಟು ಕಂದು ಹೋಗಿದ್ದೀರಿ?"

"ಹೌದು ಮಲುಹಣಿ...ಅದನ್ನು ಎಷ್ಟು ಮರೆತರೂ ಮತ್ತೆ ನೀನು ಮುಂದೆ ಬಂದು ನಿಂತಂತಾಗುತ್ತದೆ"

"ಮಲುಹಣಾ.."

ಆಕೆ ಅಪ್ಪಿಕೊಳ್ಳಬಹುದೆಂಬ ಆಸೆ ಮಲುಹಣನ ಮನದಲ್ಲಿ ಉಕ್ಕೇ ರಿತು. ಮಲುಹಣಿ ಇದ್ದಕ್ಕಿದ್ದಂತೆ ದೃಢ ನಿರ್ಧಾರದಲ್ಲಿ ಉಳಿದಳು.

"ನನಗೋಸ್ಕರ ಇಷ್ಟೊಂದು ವ್ಯಾಮೋಹಿತನಾಗುವ ಬದಲು ಏಕೆ ವಿಜಯೇಶ್ವರನ ಧ್ಯಾನ ಮಾಡಿ ಪುಣ್ಯ ಪಡೆಯಬಾರದು ?"

ಮಲುಹಣನ ಮುಖವು ಕಹಿಯಾಯಿತು. ಮಲುಹಣಿ ಮತ್ತೆ ತನ್ನ ಮಾತನ್ನು ಮುಂದುವರಿಸಿದಳು.

"ಮಲುಹಣಾ..ಈ ಹಿಮವನ್ನು ನೂಕಿ, ವಿಜಯೇಶ್ವರನ ಮಂಟಪವನ್ನು ಪ್ರವೇಶಿಸು. ಅದೋ ದೂರದಲ್ಲಿ ದುಂದುಭಿ ಶಬ್ದ, ಶಂಖಸ್ವರ, ಶಿವ ಕೀರ್ತನೆ, ವೇದಗಳುಲಿಯುತಿವೆ. ಅಲ್ಲಿ ಒಲುಮೆಯನ್ನು ಧ್ಯಾನಿಸು, ವಿಚಾರಿಸು, ಕುಡಿ ಕನಸಿನಲ್ಲಿ ಕಾಣು, ಆಗ ಜೀವನವು ಸುಂದರವೂ, ಉನ್ನತವೂ, ಪರಿಪಕ್ವವೂ, ಆಗುವುದು. ನಲ್ಮೆಯ ಸ್ವರ್ಗದಲ್ಲಿ ವಾಸಮಾಡು, ಪ್ರೀತಿಯ ಸ್ಫಟಿಕಮಯ ಗಾಳಿಯಲ್ಲಿ ತೇಲು, ಚಿರಂತನವಾದ ಪ್ರಣಯ ಪ್ರೇಮೋದ್ಯಾನದೊಳು ಸರಿದಾಡು, ನಲ್ಮೆಯ ಕುಸುಮದ ಸುಗಂಧ ದಲ್ಲಿ ವಾಸಿಸು, ಆ ಗಾನಗಳನ್ನೇ ಕೇಳು, ನಿನ್ನ ಉಚ್ಛತಮ ಧ್ಯೇಯಗಳ ನಲುಮೆಯ ಕಂಪಿನಂತೆ, ಹೂವಿನ ತುರಾಯಿಯಾಗಲಿ. ಹೆಚ್ಚು ಹೆಚ್ಚು ನಲುಮೆಯನ್ನು ಸಂಪಾದಿಸಿ ಪ್ರೇಮ ಸ್ವರ್ಗದ ಕೇಂದ್ರವಾಗಿ ನೀಬಾಳು. ಈ ವಿರಹ ವೇದನೆಯನ್ನು ನಾನು ನೋಡಲಾರೆ. ದೇವರಲ್ಲಿ ಚಿತ್ತವಿಟ್ಟು ಕೇಳಿದರೆ ನನ್ನಂಥ ನೂರಾರು ಮಲುಹಣೆಯರು ದೊರೆಯುವರು. ಅಲ್ಲಿ ತಪವೆಸಗಿ ಈ ವಿರಹವನ್ನು ಹರನ ಅಡಿಯಲ್ಲಿಡು. ಆಗ ನಿನ್ನ ಅಭೀಷ್ಟಗಳು ನೆರವೇರಿ ಜೀವನವು ಪವಿತ್ರವಾಗುತ್ತದೆ."

ಮಲುಹಣ ಇವನ್ನೆಲ್ಲಾ ಕೇಳಿದ. ಆಧ್ಯಾತ್ಮ ಇದ್ದಕ್ಕಿದ್ದಂತೆ ಆಕೆಯ ಬಾಯಲ್ಲುರುಳಿದುದು ಅಚ್ಚರಿ ತಂದಿತು. ಆಕೆಯ ಮಾತುಗಳು ಹೃದಯ ವನ್ನು ನಾಟಿದವು. ಇಷ್ಟೊಂದು ಕಠಿಣವಾಗಿ ನುಡಿಯುತ್ತಾಳೆ ಎಂದು ನೆನೆಸಿರ ಲಿಲ್ಲ. ದಿಕ್ಕು ಕಾಣದ ಎರಳೆಯಂತೆ ಪಿಳಪಿಳನೆ ಕಣ್ಣು ಬಿಟ್ಟ. ಕೆಲವು ಸಮಯದವರೆಗೆ ಏನು ಹೇಳಬೇಕೆಂಬುದೇ ತೋಚದೆ ಶಿಲೆಯಂತಾದ,ಮಾತಾ ಡಲು ಇಷ್ಟಪಡಲಿಲ್ಲ. ಆಕೆಯನ್ನೇ ಮತ್ತೆ ಮತ್ತೆ ನೋಡಿದ. ಕಣ್ಣಿಂದ ಆಕೆಯ ಸೌಂದರ್ಯವನ್ನು ಹೀರಿಕೊಂಡ. ಆಕೆಯನ್ನು ಕಂಗಳಲ್ಲಿ ತುಂಬಿ ಕೊಂಡು ಸದ್ದಿಲ್ಲದೆ ಹೆಜ್ಜೆ ಇಡುತ್ತಾ ಹೊರಟ. ಮಲುಹಣೆ ಆತನ ಪಾದದ ಗುರುತು ನೋಡುತ್ತಾ ನಿಂತಳು, ಅತಿ ದೂರ ದೇವಾಲಯದತ್ತ ಹೋದ. ಮಲುಹಣೆ ತನ್ನಲ್ಲೇ ಯೋಚಿಸಿದಳು.

"ನಾನೆಷ್ಟು ಕಠಿಣಳಾದೆ ? ಎಂಥ ಮಾತಾಡಿದೆ? ನನಗೆ ತಿಳಿಯದಂತ ಆ ಮಾತುಗಳನ್ನು ಆಡಿದೆ?"

ಬಿಕ್ಕಿ ಬಿಕ್ಕಿ ಅಳುತ್ತಾ ಮಲುಹಣೆ ಹೊರಟಳು.

ದಾರಿಯುದ್ದಕ್ಕೂ ಮಲುಹಣನಿಗೆ ಮಲುಹಣೆ ಆಡಿದ ಮಾತುಗಳು ಕಿವಿಯನ್ನು ಬೆಧಿಸಲಾರಂಭಿಸಿದವು. ವಿಜಯೇಶ್ವರನ ದೇವಾಲಯದತ್ತ ಸಮೀಪಿಸುತ್ತಿದ್ದಂತೆ ಶಿವಕೀರ್ತನೆ, ವೇದ, ನಾದ, ಶಂಖಸ್ವರ, ತರಂಗ ತರಂಗವಾಗಿ ಬರಲಾರಂಭಿಸಿದವು. ಕಾಲುಗಳು ನಿರಂತರವಾಗಿ ಅತ್ತ ಹೆಜ್ಜೆ ಕಿತ್ತವು.

*********

ಮಲುಹಣೆ ಯಾವುದೋ ಧ್ಯಾನದಲ್ಲಿ ಅನಿರೀಕ್ಷಿತವಾಗಿ ಮಲುಹಣನಿಗೆ ಅಂದ ಮಾತುಗಳು ಬಹಳ ದುಃಖ ಉಂಟುಮಾಡಿದವು. ಅಳುತ್ತಾ ಅಳುತ್ತಾ ಸುಸ್ತಾಗಿ ಹಾಗೆಯೇ ಮಲಗಿದಳು. ಇದ್ದಕ್ಕಿದ್ದಂತೆ ಕನಸಿನಲ್ಲಿ ವಿಹರಿಸಿದಳು.

ಮಲಹಣನು ಸಾಕ್ಷಾತ್ ಪರಮೇಶ್ವರನಂತೆ ಕಂಗೊಳಿಸುತ್ತಾ ಬಂದು ನಿಂತಿದ್ದಾನೆ. ಮಲುಹಣೆ ಆತನನ್ನೇ ನೋಡತ್ತಾ ನಿಂತಿರಲು..

"ಏಕೆ ಅರ್ಥವಾಗಲಿಲ್ಲವೆ ಮಲಹಣೇ, ನಾನು ನಿನ್ನ ಮಲುಹಣ, ನೀನು ಹೇಳಿದಂತೆ ದೇವರನ್ನು ಕುರಿತು ತಪಸ್ಸು ಮಾಡಿದೆ. ವಿಜಯೇಶ್ವರ ಪ್ರತ್ಯಕ್ಷನಾಗಿ ಏನು ವರ ಬೇಕೆಂದು ಕೇಳಿದ. ಅದಕ್ಕೆ ಮಲುಹಣೆ ಎಂದೆ. ಮತ್ತೆ ಏನು ಬೇಕು ಕೇಳಿಕೋ ಎಂದು ಹೇಳಲು "ಮಲುಹಣೆಯೊಡನೆ ನೂರು ವರ್ಷಗಳು ಸುಖವಾಗಿದ್ದು ಆಮೇಲೆ ಕೈಲಾಸಕ್ಕೆ ಕರೆಸಿಕೊಳ್ಳುವಂತೆ ಕೇಳಿದೆ"

"ಹೌದೇ...ಮಲುಹಣಾ...ನಾನು ಮಾಡಿದ ತಪ್ಪನ್ನು ಕ್ಷಮಿಸಿ"

ಎಂದು ಕಣ್ಣೀರು ಹಾಕಿಕೊಂಡು ಆತನ ಪಾದ ಕಮಲಗಳನ್ನು ಹಿಡಿದುಕೊಂಡಳು. ಮೆಲ್ಲನೆ ಸವಿದೋಳುಗಳನ್ನು ಹಿಡಿದು ಮೇಲೆತ್ತಿ ಮಲುಹಣ ಆಲಂಗಿಸಿಕೊಂಡ. ಮುಖದ ತುಂಬಾ ಮುತ್ತಿನ ಮಳೆಗರೆದ,

"ಇಂದಿನಿಂದ ನಾವಿಬ್ಬರೂ ಸುಖಿಗಳು ಮಲುಹಣೆ"

"ಹೌದು...."

ದಿನಗಳುರುಳಿದವು. ನೂರು ವರ್ಷಗಳು ಹತ್ತಿರವಾದವು. ಒಂದು ದಿನ ಮಲು ಹಣೆ ಶೃಂಗಾರವನ್ನು ಮಾಡಿಕೊಳ್ಳುತ್ತಿರಲು ಮಲುಹಣ ಬಂದು ನೋಡಿ

"ಏನು ಮಲುಹಣೀ...ಇನ್ನೂ ಶೃಂಗಾರ ಮಾಡಿಕೊಳ್ಳುತ್ತಿರುವೆ? ಇಷ್ಟು ವಯಸ್ಸಾದರೂ ಬಿಡಲಿಲ್ಲವೇ ? ನೀನು ಇನ್ನೂ ಭೂಲೋಕದ ವ್ಯಾಮೋಹಿತಳಾಗಿರುವಂತೆ ಕಾಣುತ್ತದೆ."

"ಯಾಕೆ ಹೀಗನ್ನುತ್ತೀರಿ?"

ತಲೆಯು ಬೆಳ್ಳಗಾಯಿತು, ದೇಹದಲ್ಲಿ ನಡುಕ ಆರಂಭವಾಯಿತು. ನಾವು ಭೂಲೋಕದಲ್ಲಿ ಕಾಲ ಕಳೆದು ನೂರು ವರ್ಷಗಳಾದುವು, ಇನ್ನು ವಿಜಯೇಶ್ವರನ ತಪಗೈದು ಕೈಲಾಸವನ್ನು ಸೇರುವುದು ಬೇಡವೇ?"

"ಹ್ಹಾಂ..ಇಷ್ಟು ಬೇಗನೆ ನೂರು ವರ್ಷಗಳು ಆದುವೆ?"

"ಏಕೆ ಇನ್ನೂ ವ್ಯಾಮೋಹ ತಪ್ಪಲಿಲ್ಲವೇ ಭೂಲೋಕದಲ್ಲಿರುವುದು?"

"ಸಾಕು ಸಂಸಾರದಲ್ಲಿ ಎಲ್ಲಾ ಸುಖವನ್ನು ಅನುಭವಿಸಿ ಆಯಿತು. ಹೋಗೋಣ"

ಇಬ್ಬರೂ ನಾರುಮಡಿಯನ್ನುಟ್ಟು ಆಸ್ತಿಯನ್ನೆಲ್ಲಾ ಬಡಬಗ್ಗರಿಗೆ ಹಂಚಿದರು. ವಿಜಯೇಶ್ವರನ ದೇವಾಲಯದಲ್ಲಿ ತಪವನ್ನಾಚರಿಸಲು ಪುಷ್ಪಕ ವಿಮಾನವು ಪುಷ್ಪ ವೃಷ್ಟಿಯೊಂದಿಗೆ ಬಂದಿಳಿಯಿತು. ಮಲುಹಣ...ಮಲುಹಣಿಯರು ಕೈ ಮುಗಿದು ನಿಂತು..

"ನಾವಿನ್ನು ಬರುತ್ತೇವೆ ಸರ್ವರಿಗೂ ಶರಣು" ಎಂದರು.

ಎಲ್ಲರೂ ಕೈ ಮುಗಿದು ನಿಂತರು. ಹೂ ಮಳೆಯು ಸತತವಾಗಿ ಬೀಳಲಾರಂಭಿಸಿತು. ಕಾಶ್ಮೀರದ ಜನರೆಲ್ಲಾ ನೋಡಲು ಓಡಿ ಬಂದರು.

ಇಬ್ಬರೂ ಕೈಲಾಸಕ್ಕೆ ಬರುತ್ತಿರಲು ಪಾರ್ವತಿಯು ಇದನ್ನು ನೋಡಿ ಈಶ್ವರನನ್ನು

"ಇದೇನು ಸ್ವಾಮಿ ಪುಷ್ಪಕ ವಿಮಾನದಿದ ಬರುತ್ತಿದ್ದಾರೆ, ಇ ವರು ಯಾರು?"

"ಅವರು ಮಲುಹಣ...ಮಲುಹಣೆಯರು..ಕಾಶ್ಮೀರದ ಅಮರ ಪ್ರೇಮಿಗಳು"

"ಅಂಥವರಿಗೂ ಕೈಲಾಸವೇ ?"

"ಹೌದು ಅವರ ಪ್ರೇಮ ಅಮರವಾದುದು. ಮಲುಹಣನು ಮಲುಹಣೆಯ ಮೇಲಿಟ್ಟ ಪ್ರೇಮ ಅಪಾರ. ಹಿಮಗೃಹದಲ್ಲಿ ವಿರಹ ತಾಪಕ್ಕೆ ತೆರಪಾಗಿ ಕುಳಿತಿರುವವರುಂಟೆ? ನನ್ನಲ್ಲಿ ಬೇಡಲು ಮಲುಹಣೆ ಹೇಳಿದಳು. ಇದಕ್ಕಾಗಿ ನನ್ನನ್ನು ಬೇಡಿ ದವರು ಯಾರಾದರೂ ಉಂಟೇ? ತನ್ನ ಮೇಲಿನ ವಿರಹವನ್ನು ನನ್ನ ಮೇಲಿಟ್ಟು ತಪ ಮಾಡಿದವರುಂಟೆ? ಅದಕ್ಕೆ ಅವರಿಗೆ ಈ ಕೈಲಾಸ ಸ್ಥಾನ"

ಇಬ್ಬರೂ ಮಾತನಾಡುತ್ತಿರಲು ಪುಷ್ಪಕ ವಿಮಾನ ಬಂತು, ಮಲುಹಣ ಮಲುಹಣೆಯರಿಬ್ಬರೂ ಕೈ ಮುಗಿದು ನಿಂತು ಈಶ್ವರ-ಪಾರ್ವತಿಯವರಿಗೆ ಸಾಷ್ಟಾಂಗವೆರಗಿದರು.

"ಆದರ್ಶ ದಂಪತಿಗಳಿಗೆ ಮಂಗಳವಾಗಲಿ" ಎಂದು ಈರ್ವರೂ ಆಶೀರ್ವದಿಸಿದರು. ಈಶ್ವರನು..

"ಮಗನೇ ಇತ್ತ ಬಾ...ಬಾ ಮಗಳೇ ನಿಮ್ಮ ಆದರ್ಶ ತ್ಯಾಗಕ್ಕೆ ಗಣ ಪದವಿಯನ್ನು ರುದ್ರಕನ್ನಿಕೆಯ ಸ್ಥಾನವನ್ನೂ ನೀಡಿರುವೆ. ನೀವು ಕೈಲಾಸದಲ್ಲಿ ಅಮರರಾಗಿರಿ."

"ಮಹಾ ಪ್ರಸಾದ ಮಹಾದೇವ"

ಓಲಗ ಗೊಟ್ಟಿ ಗಣಾಧೀಶ್ವರರು ಜಯಘೋಷವೆಸಗಿದರು.

ಕಣ್ಬಿಟ್ಟು ನೋಡಿದಳು ಮಲುಹಣೆ..."ಎಂಥ ಸುಂದರವಾದ ಕನಸು?"

ಎಂದು ನಕ್ಕಳು. ಆ ಕನಸು ನನಸಾಗಬಾರದೇಕೆ ಎಂದು ಸಮಾಧಾನಪಟ್ಟಳು.



"ಮಲುಹಣೇ.."

ಪದ್ಮಾವತಿಯ ದನಿಯಲ್ಲಿ ದೀನತೆ ತುಂಬಿತ್ತು. ಮನೆಯ ಅಲಂಕಾರದ ಕೆಲಸ ದಲ್ಲಿ ಸ್ವರೂಪ್ ಸೇವಿಕೆಯು ನಿರತಳಾಗಿದ್ದಳು. ಆಕೆ ಕೂಡಲೇ ಬಿಟ್ಟು..

"ಬಂದೆ ಪದ್ಮಾವತವ್ವಾ.." ಎನ್ನುವಷ್ಟರಲ್ಲೇ ಬೀಳುವ ಸ್ಥಿತಿಯಲ್ಲಿದ್ದಳು. ಕೂಡಲೇ ಆಕೆಯನ್ನು ಹಿಡಿದುಕೊಂಡು ಮಂಚದ ಹತ್ತಿರಕ್ಕೆ ಕರೆದು ತಂದು ಮಲಗಿಸಿದಳು. ಹೊದ್ದಿಗೆಯನ್ನು ಬೆಚ್ಚನೆ ಹೊದಿಸಿದಳು. ಆದರೂ ಚಳಿ ನಿಲ್ಲಲಿಲ್ಲ ಪದ್ಮಾವತಿಗೆ. ಆಕೆ ದೇಹವನ್ನು ಮುಟ್ಟಿ ನೋಡುತ್ತಿರಲು..

"ಇದೇನವ್ವಾ ನೀನು ನೋಡ್ತಾ ಇರೋದು? ಏಕೋ ಈ ಹೊದ್ದಗೆ ಸಾಲದು. ಅಗ್ಗಿಷ್ಟಿಕೆಗೆ ಸ್ವಲ್ಪ ಬೆಂಕಿ ಹಾಕು.."

"ಇದೇನವ್ವಾ ನೀವು ಹೇಳ್ತಾ ಇರೋದು ? ಮೈಯಲ್ಲಿ ಆರೋಗ್ಯ ಸರಿಯಿಲ್ಲ, ರಕ್ತ ಹೆಪ್ಪುಗಟ್ಟಿದಂತಾಗಿದೆ, ಈಗ ಬೆಂಕಿ ಕಾಯಿಸ್ತೀನಿ ಅಂತೀರಲ್ಲಾ ನಿಮಗೆ ತಿಳಿಯದೇ? ಮಲಗಿ ಇನ್ನೊಂದು ಕಂಬಳಿಯನ್ನು ಹೊದಿಸುತ್ತೇನೆ"

ಎಂದು ತೆಗೆದುಕೊಂಡು ಬಂದು ಹೊದ್ದಿಸಿದಳು. ಆಮೇಲೆ..

"ಸ್ವಲ್ಪ ಔಷಧಿ ತರುತ್ತೇನೆ" ಎಂದು ಹೊರಟಳು. ಪದ್ಮಾವತಿಯು ನರಳುವುದು ಸ್ವಲ್ಪ ಸ್ವಲ್ಪ ಕಡಿಮೆಯಾಯಿತು. ಅಷ್ಟರಲ್ಲಿ ಸ್ವರೂಪ್ ಬಂದಳು. ಆಮೇಲೆ ಸರೋಜ್ ಬಂದಳು.

ಮಲುಹಣೆ ಕಷಾಯ ಮಾಡಿ ತಂದು..

"ಅವ್ವಾ...ತೆಗೆದುಕೊಳ್ಳಿ" ಎಂದಳು.

"ಅಯ್ಯೋ ಇದೇನು ಪದ್ಮಾವತವ್ವ?' ಎಂದಳು ಸ್ವರೂಪ್.

"ಯಾಕೋ ಮೈಗೆ ಸರಿಯಿಲ್ಲ"

"ಕುಡಿಯಿರಿ" ಎಂದಳು ಸರೋಜ್.

"ಬೇಡ.."

"ಹಾಗೆಲ್ಲಾ ಅಂದ್ರೆ ಹ್ಯಾಗೆ, ಕಣ್ಮುಚ್ಕೊಂಡು ಕುಡೀರಿ. ವಿಷ ಕುಡಿದ್ಹಾಗೆ"

"ಹೌದು ಈಗ ನನಗೆ ಹಾಗೇ ಆಗಿದೆ. ಮರಣ ಒಂದೇ ನಮಗೆ ದಾರಿ"

"ಅಯ್ಯೋ ಹಾಗೆಲ್ಲಾ ಯಾಕೆ ಹಾಗನ್ತೀರಿ? ನೀವು ಹೊರಟುಹೋದ್ರೆ ಮಲುಹಣೆಯನ್ನು ಯಾರು ನೋಡುವವರು ?"

"ನನ್ನಿಂದಲೇ ಆಕೆಗೆ ಇಷ್ಟೊಂದು ಕಷ್ಟವಾಯಿತು...ನಾನು ಪಾಪಿ... ಸುಖ ವೈರಿ...ನಿಜ..ನನ್ನಿಂದೇನು ?"

"ಎಷ್ಟೇ ಆದರೂ ನೀವು ಅವರ ತಾಯಿಯಲ್ಲವೇ?"

"ನಾನು ಆಕೆಯ ತಾಯಿಯಾಗಲು ಅರ್ಹಳೇ ಅಲ್ಲ. ನಾನು ಕ್ಷಮೆಯನ್ನು ಕೇಳಿಕೊಳ್ಳಬೇಕು ಹೋಗಿ ಕರೆಯಿರಿ."

ಮಾತನ್ನು ಕೇಳಿ ನಂಬಲಾರದೆ ಹೋದರು. ಸ್ವರೂಪ್ ಸರೋಜ್‌ರಿಗೆ ಸಂತೋಷವಾಗಿ..

"ಆಗಲಿ"

ಎಂದು ನೇರವಾಗಿ ಮಲುಹಣೆಯನ್ನು ಕರೆತರಲು ಹೊರಟರು.

ಮಲುಹಣೆಯು ಊಟ, ತಿಂಡಿ, ನಿದ್ರೆಯನ್ನು ತೊರೆದು ದಿನ ದಿನಕ್ಕೆ ಕೃಶಳಾಗಿದ್ದಾಳೆ. ಮಲುಹಣನ ಚಿಂತೆ, ಮೈಯ ರಕ್ತ ರಕ್ತದ ಕಣ ತುಂಬ ಯೋಚನೆಯಿಂದಲೇ ದಿನವು ಕಳೆಯುತ್ತಾ ಒಣಗಿ ಕಡ್ಡಿಯಾಗಿದ್ದಾಳೆ. ತಾಯಿ, ಸ್ನೇಹಿತರು. ಎಷ್ಟು ಹೇಳಿದರೂ ಕೇಳದೆ ಕಂಗೆಟ್ಟು ಆರೋಗ್ಯ ಕೆಟ್ಟಿದೆ. ಮೈಯಲ್ಲಿ ರಕ್ತ ಇಲ್ಲ, ಕೆಮ್ಮು ಇತ್ತು. ಸ್ವಲ್ಪ ದಿನಗಳಾದರೆ ಕ್ಷಯಕ್ಕೆ ತಿರುಗಬಹುದೋ ಏನೋ ? ಮಲುಹಣನ ಮಂಪರಿನಲ್ಲೇ ಹೆಜ್ಜೆ ಇಡುತ್ತಾ ಮಹಡಿಯಿಂದ ಇಳಯುತ್ತಾ ಬರುತ್ತಿದ್ದಾಳೆ. ನಡೆಯಲು ಶಕ್ತಿ ಸಾಲದೆ ಕಾಲುಗಳ ಸ್ಥಾನ ತಪ್ಪಲು ಮಲುಹಣೆ ದೊಪ್ಪನೆ ಉರುಳಿ ಕೆಳಗಡೆ ಬಿದ್ದಳು. ಕೂಡಲೇ ಸ್ವರೂಪ್ ಸರೋಜ್ ಓಡಿ ಬಂದು ಆಕೆಯನ್ನು ಹಿಡಿದುಕೊಡು

ತೊಡೆಯ ಮೇಲೆ ಮಲಗಿಸಕೊಂಡು ನೀರನ್ನು ಚಿಮುಕಿಸಿದರು. ಮೂರ್ಛೆ ಹೊಂದಿದ್ದ ಮಲುಹಣೆಗೆ ಇಬ್ಬರು ಸ್ನೇಹಿತಯರ ಕಂಗಳಲ್ಲೂ ನೀರು ಹನಿಗೂಡಿಸಿತು.

"ಮಲುಹಣೇ...ಮಲುಹಣೇ..? ಎಂದು ಕೂಗಿದರು. ಆಕೆಗೆ ಮಾತು ಬಾರಲಿಲ್ಲ. ಎದೆಯ ಏರಿಳಿತ ಅವರಿಬ್ಬರಿಗೂ ಸ್ವಲ್ಪ ಸಮಾಧಾನ ಕೊಟ್ಟಿತು. ಅವರ ಕಣ್ಣೀರು ತೊಟ್ಟಿಕ್ಕಲು ಮಲುಹಣೆ ಮೆಲ್ದನಿಯಲ್ಲಿ..

"ಸ್ವರೂಪ್...ಸರೋಜ್.." ಎಂದಳು.

"ಅಮ್ಮ...ತಾಯಿಯವರಿಗೆ ಜ್ವರ..ಹಾಸಿಗೆ ಹಿಡಿದಿದ್ದಾರೆ"

"ಹ್ಹಾಂ...ಏನಾಯ್ತು ?"

"ಗಾಬರಿ ಪಡಬೇಕಾಗಿಲ್ಲ"

"ಔಷಧ ಕೊಟ್ಟರೆ ?"

"ಕೊಟ್ಟಿದೆ.."

" ಅವರು ನಿನ್ನ ಹಂಬಲದಲ್ಲೇ ಇದ್ದಾರೆ..."

ಹೀಗೆ ಮಾತಾಡಿ ಗಲಾಟೆಯಾಗಲು ಪದ್ಮಾವತಿ ಅಲ್ಲಿಗೆ ನರಳುತ್ತಾ ಬಂದಳು. ಅದನ್ನು ನೋಡಿ..

"ಅವ್ವಾ..ಇದೇನು ?"

"ನೀನು ಹೇಗಿದ್ದೀಯವ್ವಾ ?ಏನು ಗಲಾಟೆ ?"

"ಜ್ವರ ಆದ್ರೂ ಶೀತದಲ್ಲಿ ಏಕೆ ಬಂದುಬಿಟ್ಟೆ ?"

"ಏನ್ಮಾಡ್ಲವ್ವ ನಿನಗೆ ಅನ್ಯಾಯ ಮಾಡಿಬಿಟ್ಟೆ"

"ಈಗ ಆ ಮಾತೆಲ್ಲಾ ಏಕೆ ಆಡಿ ಆಯಾಸ ಹೆಚ್ಚು ಮಾಡಿ ಕೊಳ್ಳುತ್ತೀಯಾ? ಮಲಗು ಹೋಗವ್ವಾ..ನಾನೀಗ ಆತನನ್ನು ಕಳುಹಿಸಿ ಬಿಟ್ಟಿದ್ದೀನಿ"

ದುಗುಡವನ್ನು ನುಂಗಿ ಸಂತಸತುಂಬಿದವಳಂತೆ ನುಡಿದಳು.

"ಎಲ್ಲಿಗೆ?"

“ ನನ್ನ ಯೋಚನೆ ಬಿಟ್ಟು ದೇವರಲ್ಲಿ ತಪಸ್ಸು ಮಾಡು ಅಂತ ಹೇಳಿದೆ. ಆತ ಹೊರಟೇ ಹೋದ. ಇನ್ನೆಲ್ಲಿ ಬರ್‍ತಾನೆ ? ನೀನು ಯೋಚನೆ ಮಾಡಬೇಡ ಸುಮ್ಮನಿರವ್ವ”

“ಹಾಗಾದ್ರೆ ?”

“ಖಂಡಿತ ಬರೋದಿಲ್ಲ. ನೀನು ಯೋಚನೆ ಬಿಡವ್ವಾ”

“ಅಯ್ಯೋ..ಮಲುಹಣೇ..ಎಂಥ ಕೆಲಸ ಮಾಡಿಬಿಟ್ಟೆ ?”

“ಯಾಕವ್ವಾ ?”

“ನೀನು ಹಾಗೆ ಮಾಡಬಾರದಾಗಿತ್ತು. ನಿಮ್ಮಿಬ್ಬರನ್ನೂ ಕೂಡಿಸುವ ಹಂಬಲ ನನಗಿದೆ'

“ಅದು ಎಷ್ಟರ ಮಟ್ಟಿಗೆ ಸಾಧ್ಯ ಎಂಬುದು ಗೊತ್ತಾಗೋಲ್ಲ. ನನಗೆ ತಿಳಿಯೋಲ್ಲ”

“ಅಯ್ಯೋ ದೇವರೇ...ನನ್ನ ಕಾಲನ್ನು ಮತ್ತಷ್ಟು ಬೀಳಿಸುವಂತೆ ಮಾಡಬೇಡ ಎಂಥ ಸುಂದರಿ ಹೇಗಾಗೋದೆ ?”

“ಇನ್ನು ನನ್ನ ಸೌಂದರ್ಯವನ್ನು ಯಾರು ನೋಡಬೇಕಾಗಿದೆ ?”

“ಮಲುಹಣೆ ನೀನು ಸುಖವಾಗಿದ್ದರೆ ಸಾಕು ಮಲುಹಣನನ್ನು ಕರೆಸಿಕೊಂಡು ಸುಖವಾಗಿರು. ನಾನು ಕಣ್ತುಂಬಾ ನೋಡಿ ಆತನನ್ನು ಕ್ಷಮೆ ಕೇಳಿಕೊಳ್ಳಬೇಕು”

ಮೊಗದಲ್ಲಿ ಸಮಾಧಾನ ತುಂಬಿ ಸಂತಸದಿಂದ ಮುಗುಳ್ನಕ್ಕಳು. ಮೇಲೆದ್ದು ಕುಳಿತುಕೊಳ್ಳುವ ಸ್ಫೂರ್ತಿ ಬಂದು ಕುಳಿತು..

“ಅವ್ವಾ..ಇದು ನಿಜವೇ ?”

“ನಿನಗಿತ ಹೆಚ್ಚು ಇನ್ನೇನಿದೆ ನನ್ಗೆ ಹೇಳು ಮಲುಹಣೇ, ನಿನ್ನಿಷ್ಟ ಒಪ್ಪಿದ ಹಾಗೆ ಮಾಡು, ನೀನು ಗೆಲುವಾಗಿ ಮೊದಲಿನಂತೆ ಇದ್ದರೆ ಸಾಕು.

“ಹಾಗಾದರ ನಾನೀಗ ಕರೆದುಕೊಂಡು ಬಂದುಬಿಡುತ್ತೇನೆ”

“ನಾನು ಆತನ ಮುಖ ನೋಡಿದರೆ ಪುಣ್ಯ, ಬೇಗ ಕರೆತಾ'

"ಇದೋ ಈಗ್ಗೇ..ಓಡಿ ಬಂದುಬಿಡ್ತೇನೆ. ಕರೆತರೋಣ ಬಾ ಸ್ವರೂಪ್. ಸರೋಜ್ ನೀನು ಇಲ್ಲೇ ಇರು..ತಾಯಿಯವರನ್ನು ನೋಡಿ ಕೊಂಡು"

ಎಂದು ಎದ್ದು ನಿಂತಳು. ಓಡುವಷ್ಟು ಸ್ಫೂರ್ತಿ ಶಕ್ತಿ, ಆಕೆಯ ನರ ನಾಡಿಗಳಲ್ಲಿ ಇದ್ದಕ್ಕಿದ್ದಂತೆ ಕೂಡಿ ಬಂತು. ಪದ್ಮಾವತಿ ಮಗಳನ್ನು ನೋಡಿ..

"ಇದೇನು ಮಲುಹಣೆ, ಈ ಸ್ಥಿತಿಯಲ್ಲಿ ಓಡುತ್ತಿದ್ದೀಯಾ?"

"ಹೌದವ್ವಾ...ಹೌದು..ನಾನು ಬೇಗ ಹೋಗಬೇಕು. ಅವರಿಗೆ ನಿನ್ನ ಸಂಕಲ್ಪ ತಿಳಿಸಬೇಕು. ಕರೆದುಕೊಂಡು ಮನೆಗೆ ಬರಬೇಕು"

ಎಂದು ಓಡಿದಳು ಸ್ವರೂಪ್ ಜತೆ.

"ಅಯ್ಯೋ ಹುಚ್ಚು ಹುಡುಗಿ" ಎಂದು ಮುಗುಳ್ನಗುತ್ತಾ ಪದ್ಮಾವಿತ ಮಂಚದೆಡೆ ಹೋಗಿ ಮಲಗಿಕೊಂಡಳು.

ಸರೋಜ್ ತಾಯಿಯನ್ನು ಕುರಿತು...

"ನೋಡಿದಿರಾ..? ಪ್ರಿಯತಮನನ್ನು ನೋಡಲಿಕ್ಕೆ ಎಷ್ಟೊಂದು ಸ್ಫೂರ್ತಿ ಬಂದುಬಿಡ್ತು?"

"ಹೇಗೋ ಆಕೆ ಮೊದಲಿನಂತದರೆ ಸಾಕು" ಎಂದು ಹರಿವ ಕಣ್ಣೀರನ್ನು ಒರಸಿಕೊಂಡಳು.

ತಾಯಿಯ ಮಾತನ್ನು ಕೇಳಿ ಎಲ್ಲಿಲ್ಲದ ಸಂತೋಷ ತುಂಬಿ ಹರಿಯಿತು. ಕೃಶವಾದ ದೇಹವು ಅತಿ ಜೋರಾಗಿ ವಿಜಯೇಶ್ವರ ದೇವಾಲಯದತ್ತ ನಡೆಯಿತು. ದಾರಿಯಲ್ಲಿ ಓಡುತ್ತೋಡುತ್ತಾ ಮನಸ್ಸು ನಾನಾ ವಿಧವಾಗಿ ಆಸೆಯನ್ನು ಗುಣಿಸಿತು. ಮಲುಹಣನನ್ನು ನೋಡುವ ಆಸೆ ಮನದಲ್ಲಿ ಅತಿಯಾಗಲು ಓಟವು ಇನ್ನೂ ಹೆಚ್ಚಾಯಿತು. ಆದರೆ ಮನದಲ್ಲಿ ನಾನಾ ಚಿಂತೆ ಮಿಡಿಯಲು ದುಗುಡ ಹೆಚ್ಚಿತು.

"ನಾನು ಎಷ್ಟೊಂದು ಕಠಿಣಳಾಗಿ ನುಡಿದುಬಿಟ್ಟೆ? ಈಗ ಅವರಿಗೆ ಹೇಗೆ ಮುಖ ತೋರಿಸಲಿ? ಮುಖ ತೋರಿಸಿದರೂ ಮಾತನ್ನುಹೇಗೆ ಆಡಲಿ? ಮಾತಾಡಿಸಿದರೂ ಒಲಿಸಿಕೊಳ್ಳುವುದು ಹೇಗೆ ?"

ಎಂದಿಗೂ ನನ್ನ ತಿರಸ್ಕರಿಸಲಾರರು, ನನ್ನನ್ನು ಕಂಡರೆ ಅವರಿಗೆ ಅತಿ ಪ್ರೀತಿ. ಪ್ರೀತಿಯಿಂದಲೇ ಮಾತಾಡಿಸುತ್ತಾರೆ, ಅಪ್ಪಿಕೊಳ್ಳುತ್ತಾರೆ... ಅಪ್ಪಿಕೊಂಡು.."ಮುಂದಿನ ಪದವನ್ನು ಹೇಳಲಾರದೆ ನಕ್ಕಳು. ಶಕ್ತಿ ಇಲ್ಲದಿದ್ದರೂ ಮತ್ತಷ್ಟು ನಕ್ಕಳು.

"ನನ್ನ ನೋಡಿ ಏನನ್ನುತ್ತಾರೋ?ತಿರಸ್ಕರಿಸುತ್ತಾರೋ? ಮೊದಲಿದ್ದ ರೂಪಿಲ್ಲ, ಮೈ ಮುಖಗಳಲ್ಲಿ ಮಾಂಸವಿಲ್ಲ, ನರ ಬಿಟ್ಟ, ಹೆಣದಂತಿರುವ ನನ್ನನ್ನು ಗುರುತಿಸುವರೋ ಅಥವಾ..ತಿರಸ್ಕರಿಸುವರೋ..."ಅವರಿಗೆ ಗೊತ್ತಿಲ್ಲವೇ? ಅವರಿಗೋಸ್ಕರ ಊಟ ತಿಂಡಿ ಬಿಟ್ಟು ರಾತ್ರಿಯೆಲ್ಲಾ ಅವರ ಚಿಂತೆ ಮಾಡಿ ಈ ರೂಪಾಗಿದೆ. ಖಂಡಿತ ಅರ್ಥಮಾಡಿಕೊಳ್ಳುತ್ತಾರೆ. ರಸಿಕ ಚಕ್ರಿಗಳಾದ ಅವರಿಗೆ ನಾನು ಅರಸಿಕಳಾದರೆ ಗತಿ? ಹೇಗಾದರೂ ಆಗಲಿ ನನ್ನ ಸಂಕಲ್ಪ ?ನನ್ನ ಪ್ರಿಯತಮನನ್ನು ನೋಡುವುದು, ಮಾತಾ ಡುವುದು ಅಷ್ಟೇ".

ಮಂಜಿನ ಮೇಲೆ ಹೆಜ್ಜೆ ಇಡುತ್ತಾ ವಿಜಯೇಶ್ವರನ ದೇವಾಲಯದ ಗುಡ್ಡದತ್ತ ಓಡಿದಳು. ಸತತವಾಗಿ ಮಂಜು ಬೀಳುತ್ತಿದ್ದರೂ ಲೆಕ್ಕಿಸದೆ ತಲೆಯ ಮೇಲೆ ಮುಸುಕನ್ನು ಹಾಕಿಕೊಂಡು ಸರಿದಳು. ದೂರದ ದೇವಾಲಯದ ಘಂಟೆಯ ಶುಭ ಸೂಚನೆಯೇ ಎನ್ನಿಸಿತು.

ದೇವಾಲಯದ ಮುಂಭಾಗದಲ್ಲಿ ವಿಜಯೇಶ್ವರನ ಧ್ಯಾನದಲ್ಲಿ ತಲ್ಲೀನನಾಗಿದ್ದನು ಮಲುಹಣ. ಆತನನ್ನು ನೋಡಿದ ಮಲುಹಣೆಗೆ ಸಂತೋಷ ಉಂಟಾಯಿತು. ಮಂಡಿಯೂರಿ ನಮಸ್ಕರಿಸಿ..

"ಸ್ವಾಮಿ" ಎಂದಳು.

ಮಲುಹಣನಿಂದ ಯಾವ ಉತ್ತರವೂ ಬರಲಿಲ್ಲ.

ಮತ್ತೆ ನುಣ್ದನಿಯಲ್ಲಿ...

"ಮಲುಹಣ ದೇವಾ...ಮಲುಹಣ ದೇವಾ..." ಎಂದಳು.

ಆದರೂ ಉತ್ತರ ಬರಲಿಲ್ಲ. ಕಂಗಳಲ್ಲ ನೀರೂರಿತು.

"ಸ್ವಾಮಿ...ನಾನು....ಮಲುಹಣೇ...ನಿಮ್ಮ...ಮಲುಹಣೇ...

ಬಂದಿದ್ದೀನಿ. ಕಣ್ಬಿಡಿ, ಮಾತಾಡಿ, ನಾನು ಕಠೋರವಾಗಿ ನುಡಿದೆ ಅಂತ

ನಿಮಗೆ ಕೋಪವೋ ಏನೋ? ಅರಿತೋ ಅರಿಯದೆಯೋ ಮಾಡಿದ ತಪ್ಪನ್ನು ಕ್ಷಮಿಸಿ ಬಿಡಿ. ನೀವು ಹಾಗೆಂದರೆ ನನಗೆ ಮುಕ್ತಿ. ಜೀವನದಲ್ಲಿ ಸಂತೋಷ ಜೀವನ ದಲ್ಲಿ ನಂಬಿದ್ದದ್ದು ಇನ್ನ್ಯಾರಲ್ಲಿ ಈಗ ನನ್ನ ಕಷ್ಟ ಸುಖಗಳನ್ನು ಹೇಳಿಕೊಳ್ಳಲಿ ? ಹೇಳಿ ಮತ್ತ "ಕಣ್ಬಿಟ್ಟ ಮಲುಹಣ ನೋಡಿದ. ಅಂದಿಗೂ ಇಂದಿಗೂ ಮಲುಹಣೆ ಬಹಳ ವ್ಯತ್ಯಾಸವಾಗಿದ್ದಳು, ಅನ್ನುವುದಕ್ಕಿಂತ ಕಂಗೆಟ್ಟು ಕಡ್ಡಿಯಾಗಿದ್ದಳು. ಆಕೆಯನ್ನು ನೋಡಿ ಕನಿಕರ ಬಂತು ಮಲುಹಣ ನಿಗೆ..

"ಮಲುಹಣೇ.."

ಅಪ್ಪಿಕೊಳ್ಳುವರೆಂಬ ಆಸೆಯಿತ್ತು, ಆದರೆ ಮತ್ತೆ ಪ್ರಶ್ನಿಸಿ.

"ಯಾವಾಗ ಬಂದೆ?"

"ಎಷ್ಟೋ ಹೊತ್ತಾಯಿತು. ನನ್ನ ರೋದನ ಈಗ ನಿಮಗೆ ತಿಳಿ ಯಿತೇ?"

"ನೀನೂ ರೋದನ ಪಡಬೇಕೇ?"

"ಅಂದರೆ..."

"ನನಗೆ ಸ್ಫೂರ್ತಿಯಿತ್ತ ದೇವತೆ ನೀನು. ನೀನೂ ರೋದನ ಮಾಡು ವುದೇ...?"

"ಮತ್ತೆ ಮಾತಾಡದಿದ್ದರೆ ಏನು ಮಾಡಬೇಕು?"

"ಪೆಚ್ಚಿ..."

"ತಾಯಿಯವರು ಒಪ್ಪಿದ್ದಾರೆ. ನಿಮ್ಮನ್ನು ಕರೆದುಕೊಂಡುಬರಲು ನಮ್ಮಿಬ್ಬರನ್ನು ಕಳುಹಿಸಿದ್ದಾರೆ"

"ಎಲ್ಲಿಗೆ?"

"ಮನೆಗೆ.."

"ಏತಕ್ಕೆ...?"

"ಇದೇನು ನಿಮ್ಮ ಪ್ರಶ್ನೆ ? ಆಗಲೇ ನನ್ನನ್ನು ಮರೆತುಬಿಟ್ಟಿರಾ ? ನನ್ನನ್ನು ಅಷ್ಟೊಂದು ಪ್ರೀತಿಸುವವರು ಮರೆತುಬಿಟ್ಟರಾ?"

“ನಿನ್ನನ್ನು ಮರೆತುಬಿಡುವುದಕ್ಕಾಗುತ್ತದೆಯಾ ? ಚಿನ್ನಾ, ನಿನ್ನ ಮೇಲೆ ತುಂಬಾ ಪ್ರೀತಿ ಇದೆ.”

“ಹಾಗಾದರೆ ಬನ್ನಿ ಮತ್ತೆ”

“ಆದರೆ ಅದು ಪ್ರೀತಿಲತಯಾಗಿಯೇ ಉಳಿಯುವುದು ಇನ್ನು ಅದು ಕಾಮಲತೆಯಾಗಲಾರದು”

“ಸಾಕು ನಿಮ್ಮ ಆಧ್ಯಾತ್ಮಿಕ ಮಾತುಗಳು”

“ಹೌದು...ಇದು ಖಂಡಿತ...”

ಮಾತಾಡುವ ಮೋಡಿಯಲ್ಲಿ ಆಕೆಗೆ ತನ್ನ ಬಯಕೆ ಈಡೇರದೆನಿಸಿತು. ಆದರೂ ಕೆಣಕಿ..

“ಮನೆಗೆ ಹೋಗೋಣವೇ ?”

“ಮನೆ..ನನಗೆ ಇನ್ನಾವ ಮನೆ? ಬೇರೆಯವರಿಗೆ ಕೊಟ್ಟಾಯಿತು. ಇದೇ ನನ್ನ ಮನೆ”

“ನನ್ನಲ್ಲಿ ಇನ್ನೂಕಣ್ಣೀರು ನೋಡಬೇಕು ಅಂತ ಆಸೆಯೇನು ?”

“ಪಾಪ, ನನ್ನ ಚಿಂತೆಯಲ್ಲಿ ಅನ್ನ ನೀರು ಬಿಟ್ಟು ಕೃಶಳಾಗಿರುವುದು ನನಗೆ ಅರ್ಥವಾಗಿಲ್ಲ ಎಂದು ತಿಳಿದುಕೊಂಡಿದ್ದೀಯಾ ನಿನ್ನ ಮುಖ ನೋಡಿದರೆ ಸಂಕಟವಾಗುತ್ತದೆ. ಆದರೂ ನನ್ನ ಸಂಕಲ್ಪ ಏಕೋ ಮತ್ತೊಂದೆಡೆ ದೇವನತ್ತ ಬಾಗಿ ಬಿಟ್ಟಿದೆ”

“ಅಂದರೆ ಇದೇನು ನೀವು ಹೇಳ್ತಾ ಇರೋದು ?”

“ಮಲುಹಣೀ ನೀನು ನನ್ನ ಭಾಗದ ದೇವರು”

“ಇದು ದೊಡ್ಡ ಮಾತು”

“ಇಲ್ಲ..ನನ್ನ ಭಾಗದ ಗುರು...”

“ಸ್ವಾಮಿ ಇಷ್ಟೆಲ್ಲಾ ಭಾರ ಹೊರಸಿ ನನ್ನ ಹೃದಯ ಹಿಂಡ್ತೀರಲ್ಲ, ನಾನು ನಿಮ್ಮ ಭಾಗಕ್ಕೆ ಬೇಡವಾದನೇ ?”

“ಹಾಗಂದವರಾರು...?”

“ಮತ್ತೆ ಏನೇನೋ ಹೇಳ್ತೀರಾ ?”

“ಹೌದು ನೀನು ಮಾತೃ...ದೇವತೆ”

“ಪ್ರಿಯತಮೆಯನ್ನು ಹೀಗೆಲ್ಲಾ ಅಂದು ಕರುಳ ಚುರುಕ್ ಅನ್ನಿಸ ಬೇಡಿ”

“ಹೌದು ಪ್ರಿಯತಮೆ, ದೇವ, ಗುರು, ಮಾತೃ ಸ್ಥಾನದಲ್ಲಿರುತ್ತಾಳೆ”

“ಇರಬಹುದು ಆದರೆ ನನಗೆ ನೀವೇ ಬೇಕು ಮನೆಗೆ ಬರಬೇಕು”

“ಮಲುಹಣೀ ನನಗೆ ಮತ್ತೆ ಮನೆಗೆ ಬರುವ ಮನಸ್ಸಿಲ್ಲ”

“ತಾಯಿ ನೋಡಿ ನಿಮ್ಮನ್ನು ಕ್ಷಮೆ ಕೇಳಿಕೊಳ್ಳಬೇಕಂತೆ”

“ಬರಲಾರೆ...?”

“ಸ್ವರೂಪೇ ಹಾಗಾದರೆ ನೀನು ತಾಯಿಯನ್ನು ಇಲ್ಲಿಗೆ ಕರೆದು ಕೊಂಡು ಬರುತ್ತೀಯಾ..?”

“ಆಗಲಿ..”

ಎಂದು ಹೊರಟಳು. ಮಂಜಿನ ಮೇಲೆ ಹೆಜ್ಜೆ ಇಡುತ್ತಾ

ಇತ್ತ ಪದ್ಮಾವತಿಗೆ ಮಲುಹಣ ಬಾರದಿರಲು ನೋಡುವ ಬಯಕೆ ಬೇರೂರಿತು. ಆಗಲೂ ಸರೋಜ್‌ಳನ್ನು..

“ಇನ್ನೂ ಬರಲಿಲ್ಲವೇ ?” ಎಂದಳು.

“ಬರುತ್ತಾರೆ...ನೀವು ಹಾಗೇ ಮಲಗಿರಿ”

“ನನ್ನ ಮನಸ್ಸ ತಡೆಯುತ್ತಿಲ್ಲ ಸರೋಜ, ನಾನು ಮಲುಹಣನಿಗೆ ಅನ್ಯಾಯ ಮಾಡಿದ. ಮೋಸ ಮಾಡಿದೆ, ವಿರಹಕ್ಕ ಕಾರಣಳಾದೆ, ಅಂಥ ಶರಣ ಕವಿ ಪುಣ್ಯಾತ್ಮನನ್ನು ನೋಡಲೇಬೇಕು. ಈ ಅನಿಷ್ಟದ ಮುಖವನ್ನು ಆ ಮಹಾನುಭಾವನಿಗೆ ಹೇಗೆ ತೋರಿಸಲಿ? ಎಂಬ ದುಃಖ ನನ್ನನ್ನು ಕಾಡುತ್ತಿದೆ”

“ಹಾಗೆಲ್ಲ ಅನ್ನಬೇಡಿ...ನಿಮ್ಮನ್ನು ಮರ್ಯಾದೆಯಿಂದ ನೋಡು ತ್ತಾರೆ. ಅವರ ಇನ್ನೇನು ಬರುತ್ತಾರೆ”

“ಇಲ್ಲ ಸರೋಜ್...ಬರಲಿಲ್ಲ. ನಾವೇ ಹೋಗೋಣ ದೇವಾಲ ಯದಲ್ಲಿ ನೋಡೋಣ...”

ಎಂದು ನರಳುತ್ತಾ ಮೇಲೆದ್ದಳು

"ಇದೇನು ಪದ್ಮಾವತಿಯವರೇ ?"

"ಇಲ್ಲ....ನಡೆಯಮ್ಮ..." ಎಂದು ಹೊರಡಲು ಸಿದ್ಧವಾಗಲು..

ಹೋಗುವುದನ್ನು ತಡೆದು ಮಲಗಿಸಿದಳು.

"ಸ್ವಲ್ಪ ಕಷಾಯ ಮಾಡಿ ತರುವೆ ಹಾಗೇ ಮಲಗಿರಿ"

ಎಂದು ಹೊರಟಳು ಕಷಾಯ ಮಾಡಿಸಲು. ಅಷ್ಟರಲ್ಲಿ ಧೃಡ ತಡೆಯದೆ ಪದ್ಮಾವತಿ ನಡುಗುತ್ತಲೇ ಓಡಿದಳು ದೇವಾಲಯದತ್ತ. ಅರ್ಧ ದಾರಿಗೆ ಬಂದು ಮುಂದೆ ಹೋಗಲಾರದೆ..

"ಮಲುಹಣಾ.... ಮಲುಹಣಾ..ನನ್ನನ್ನು ಕ್ಷಮಿಸು" ಎಂದು ಮಂಜಿನಲ್ಲಿ ನಾಟಿ ಮುಖ ಕೆಳಗೆ ಮಾಡಿ ಬಿದ್ದಳು.

ಸರೋಜ್ ಕಷಾಯ ತಂದಳು. ಅಲ್ಲಿ ಪದ್ಮಾವತಿ ಇರಲಿಲ್ಲ. ಮಲುಹಣನ ದರ್ಶನಕ್ಕೆ ಓಡಿ ಹೋಗಿದ್ದಳು. ಆಕೆಯ ಹೆಜ್ಜೆಯನ್ನೇ ನೋಡಿಕೊಂಡು..

ದಾರಿಯಲ್ಲಿ ಮುಖ ಕೆಳಗೆ ಮಾಡಿ ಮಂಜಿನಲ್ಲಿ ಹೂತುಕೊಂಡಿದ್ದ ಪದ್ಮಾವತಿಯನ್ನು ನೋಡಿ..

"ಪದ್ಮಾವತವ್ವಾ..." ಎಂದು ಕೂಗಿದಳು. ಆಕೆ ಇಹವನ್ನು ತ್ಯಜಿಸಿದ್ದಳು..

ಅನಿಷ್ಟ ಮುಖವನ್ನು ಶಿವಶರಣನಿಗೆ ತೋರಬಾರದೆಂದು ಮುಖವನ್ನು ಹಾಗೆ ಮಾಡಿ ಮಲಗಿದ್ದಾಳೆಯೋ ಎಂಬತಿತ್ತು.

ಸರೋಜ್ ಜೋರಾಗಿ "ಪದ್ಮಾವತವ್ವಾ...' ಎಂದು ಕೂಗಿಕೊಂಡಳು.

ಕೂಡಲೇ ಅತ್ತಿಂದ ಸ್ವರೂಪ್ ಓಡಿಬಂದಳು.

"ಪದ್ಮಾವತವ್ವಾ..." ಎಂದು ಕೂಗಿದಳು. ಪದ್ಮಾವತಿಯು ಇಹವನ್ನು ಬಿಟ್ಟಾಗಲೇ ಎಷ್ಟೋ ಹೊತ್ತಾಗಿತ್ತು. ಇಬ್ಬರೂ ಕಣ್ಣೀರಿಡುತ್ತಾ ವಿಷಯವನ್ನು ಮಲುಹಣನಿಗೆ ತಿಳಿಸಲು ಓಡಿಬಂದರು ದೇವಾಲಯದತ್ತ.

ಇತ್ತ ಮಲುಹಣೆಯು ಮಲುಹಣನನ್ನು ಕುರಿತು...

"ಹಾಗಾದರೆ ನಾನು, ಪತಿ ಎಲ್ಲಿರುತ್ತಾನೋ ಅಲ್ಲಿಯೇ ಇರುತ್ತೇನೆ"

"ಸುಖದ ಸುಪ್ಪತ್ತಿಗೆಯಲ್ಲಿರಬೇಕಾದವಳು ಇಲ್ಲಿ.."

"ನಾನು ನಿಮ್ಮ ಚರಣದಾಸಿ, ನಿಮ್ಮ ಸೇವೆಯಿಂದ ನನ್ನ ಜೀವನ ಸಾರ್ಥಕವಾಗಬೇಕು. ನನ್ನ ಹಣ, ಐಶ್ವರ್ಯ ಎಲ್ಲವನ್ನೂ ದಾನ ಮಾಡಿ ಬಿಡುವೆ. ನಾನು ನಿಮ್ಮೊಡನೆ ಸದಾ ವಿಜಯೇಶ್ವರನ ಜಪದಲ್ಲಿ ಕಾಲ ಕಳೆಯುವೆ"

ಎಂದು ತಾನು ಕಂಡ ಕನಸನ್ನು ವಿವರಿಸಿದಳು. ಮಲುಹಣನು ಅದನ್ನು ಕೇಳಿ ನಕ್ಕನು ಮತ್ತೆ..

"ಏಕೆ ಹಾಗಾಗಬಾರದು? ಮನುಷ್ಯನ ಪ್ರಯತ್ನಕ್ಕಿಂತ ಒಂದಿದೆಯೇ?

ಹೀಗೆ ಇಬ್ಬರೂ ಮಾತನಾಡುತ್ತಿರಲು ಅಲ್ಲಿಗೆ ಸ್ವರೂಪ್ ಸರೋಜ್ ಕಂಗಳಲ್ಲಿ ನೀರು ತುಂಬಿಕೊಂಡು ನಿಂತರು. ಅವರನ್ನು ನೋಡಿದ ಮಲುಹಣ..

"ಸ್ವರೂಪ್..ಸರೋಜ್..ಏನು?"

ಎಂದು ತಲೆಯೆತ್ತಿ ಮಲುಹಣೆ ನೋಡಿದಳು. ಅವರ ಕಂಗಳು ಯಾವುದೋ ದುಃಖ ಸಮಾಚಾರವನ್ನು ಹೇಳುವಂತಿದ್ದವು.

"ಏನು ಸ್ವರೂಪ್ ?" ಎಂದಳು.

ದುಗುಡದ ದನಿಯಲ್ಲಿ ಆಕೆ..

"ಮಲುಹಣೇ....ತಾಯಿಯವರು ಇಹವನ್ನು ತ್ಯಜಿಸಿದರು" ಮಲುಹಣೆಗೆ ಮೊದಲು ದುಃಖವಾದರೂ ತಡೆದು,

"ವಿಧಿಯನ್ನು ಯಾರೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಎಷ್ಟೆಷ್ಟು ದಿನಗಳ ಋಣವೋ ತೀರಿತು. ವಿಧಿಯು ಅವರನ್ನು ಕರೆದೊಯ್ಯಿತು.

"ಸಂಸ್ಕಾರ ನಡೆಯಲಿ."

"ನೀವು ?" ಸ್ವರೂಪ್ ಕೇಳಿದಳು.

"ನಾನು ಬಂದರೆ ಉಳಿದುಕೊಳ್ಳುತ್ತಾರೆಯೇ ?"

"ಎಷ್ಟೇ ಆಗಲಿ ತಾಯಿಯಲ್ಲವೇ ?" ಎಂದಳು ಸರೋಜ್.

"ಪ್ರಪಂಚದ ಹೆಂಗಸರೆಲ್ಲಾ ನನ್ನ ತಾಯಿಯ ಸಮಾನ. ನೀವು ಕಾರ್ಯವನ್ನು ಮುಗಿಸಿ ನಡೆಯಿರಿ ಹೋಗೋಣ. ಐಶ್ವರ್ಯವನ್ನೆಲ್ಲಾ ಬಡ ಬಗ್ಗರಿಗೆ ಹಂಚಿಬಿಡೋಣ. ತಂದು ಬಿಡೋಣ"

"ಆಗಲೀ ತಾಯಿ" ಎಂದು ಮೂವರೂ ಹೊರಟರು. ಸಂಸ್ಕಾರ ಮುಗಿಸಿ ಐಶ್ವರ್ಯವನ್ನೆಲ್ಲ ಬಡವರಿಗೆ ದಾನ ನೀಡಿ ಮಲುಹಣೆ ಬಂದಳು. ಮಲುಹಣನು ಆಕೆಯ ತ್ಯಾಗಕ್ಕೆ ಮಣಿದು.

"ಇದೆಂಥ ಸಂಕಲ್ಪ ?"

"ಕೊನೆಯ ಸಂಕಲ್ಪ, ಪ್ರಪಂಚದ ಸುಖ ಸಾರವನ್ನು ಅನುಭವಿಸಿ ಆಯಿತು. ದೇವನ ಜಪ ತಪಗಳಲ್ಲಿ ಸುಖವನ್ನು ಕಾಣುವ ಆಸೆ ನನ್ನಲ್ಲೂ ಮೂಡಿತು ಅಷ್ಟೇ "

ಎಂದು ಚರಣಕಮಲದಲ್ಲಿ ಬಿದ್ದಳು.

ವಿಜಯೇಶ್ವರನು ಇಬ್ಬರ ತ್ಯಾಗಕ್ಕೂ ಮುಗುಳ್ನಕ್ಕು ಆಶೀರ್ವದಿಸುವಂತೆ ಕಂಡ.

ಮಂಗಳ ವಾದ್ಯಗಳು ಆದರ್ಶ ಪ್ರೇಮಿಗಳ ತ್ಯಾಗಕ್ಕೆ ಮಂಗಲ ಹಾಡಿದಂತಾದವು.

ಮಲುಹಣನ ಮಹಾ ಪರಿವರ್ತನೆಯ ವೈಚಿತ್ರ್ಯವೆಲ್ಲಾ ನಿನ್ನದೇ ಎಂದು ವಿಜಯೇಶ್ವರನನ್ನು ಹೊಳೆವ ಕಂಗಳಿಂದ ನೋಡಲಾರಂಭಿಸಿದ.

# ಮಲುಹಣದೇವ

ಕಾಶ್ಮೀರದ ಶೈವಕವಿ ಮಲುಹಣದೇವನ ಜೀವನವನ್ನು ಚಿತ್ರಿಸುವ ಒಂದು ಶೃಂಗಾರ ಕಾದಂಬರಿ ಇದು. ಶಿವಶರಣರ ಸಾಲಿಗೆ ಸೇರಿರುವ ಈತನ ಜೀವನವನ್ನು ಹರಿಹರ ಅಂದಿನ ಜನರ ಬಾಯಿಂದ ಕೇಳಿ 'ಮಲುಹಣದೇವ ಚರಿತ್ರ' ಎಂಬ ಪುಟ್ಟ ರಗಳೆ ಕಾವ್ಯವನ್ನು ರಚಿಸಿದ ನೆಂದು ತಿಳಿಯಬಹುದು. ಮೂಲ ಕೃತಿಗೆ ಯಾವ ಚ್ಯುತಿ ಬಾರದ ರೀತಿಯಲ್ಲಿ ಕೆಲವು ಮಾರ್ಪಾಟುಗಳೊಂದಿಗೆ ಈ ಕೃತಿಯನ್ನು ರಚಿಸಿರುವೆ ಈ ಕಾದಂಬರಿಯಲ್ಲಿ ಕಾಶ್ಮೀರದ ವರ್ಣನೆ, ಜನಜೀವನ, ಮಲುಹಣ, ಮಲುಹಣಿ, ಸುವರ್ಣಭಟ್ಟ, ಪದ್ಮಾವತಿಯರ ವ್ಯಕ್ತಿತ್ವಗಳನ್ನು ಸವಿಸ್ತಾರವಾಗಿ ತಂದಿದ್ದೇ

ಡಾ. ಬಿ. ಎಸ್. ಸ್ವಾಮಿ

ಮೊದಲ ಮುದ್ರಣ 1995